# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ನವೆಂಬರ್ ೧೩, ೨೦೧೪ (ಕಾರ್ತೀಕ ೨೨, ಶಕ ವರ್ಷ ೧೯೩೬)<br>Bangalore, Thursday, November 13, 2014 (Karthika 22, Shaka Varsha 1936) | ಸಂಚಿಕೆ ೪೫<br>Issue 45 |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಆರೋಪಿತರಾದ ಶ್ರೀ ನೀಲಕಂಠ ರಾಥೋಡ್, ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಗುಲ್ಬರ್ಗಾ, ಇವರ ಮೇಲಿನ ಧಾಳಿ ಪ್ರಕರಣದಲ್ಲಿ ಅಭಿಯೋಜನಾ ಮಂಜೂರಾತಿ ನೀಡುವ ಬಗ್ಗೆ–ಆದೇಶ.

**ಓದಲಾಗಿದೆ :** ಅಪರ ಪೊಲೀಸ್ ಮಹಾ ನಿರ್ದೇಶಕರು ಕರ್ನಾಟಕ ಲೋಕಾಯುಕ್ತ ಇವರ ಪತ್ರ ಸಂಖ್ಯೆ ಲೋಕ್/ಐಎನ್‌ವಿ(ಜಿ)/ಜಿ–45/ಮೊ.ನಂ 10/2010 ಗುಲ್ಬರ್ಗಾ ದಿನಾಂಕ: 04.02.2014.

**ಪ್ರಸ್ತಾವನೆ:**

ಅಪರ ಪೊಲೀಸ್ ಮಹಾ ನಿರ್ದೇಶಕರು ಕರ್ನಾಟಕ ಲೋಕಾಯುಕ್ತ ಇವರು ಮೇಲೆ ಓದಲಾದ ಪ್ರಸ್ತಾವನೆಯಲ್ಲಿ ಶ್ರೀ ನೀಲಕಂಠ ರಾಥೋಡ್, ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಗುಲ್ಬರ್ಗಾ,ಇವರ ಮೇಲಿನ ಧಾಳಿ ಪ್ರಕರಣದಲ್ಲಿ ಅಭಿಯೋಜನಾ ಮಂಜೂರಾತಿ ಆದೇಶವನ್ನು ನೀಡುವಂತೆ ಸರ್ಕಾರದ ಅದೇಶವನ್ನು ಕೋರಿದ್ದಾರೆ. ಆರೋಪಿತ ಅಧಿಕಾರಿಯು ತಮ್ಮ ಬಲ್ಲ ಮೂಲಗಳ ಆದಾಯಕ್ಕಿಂತ ಹೆಚ್ಚಿನ ಪ್ರಮಾಣದ ಆಸ್ತಿಯನ್ನು ಹೊಂದಿರುತ್ತಾರೆಂದು ತಿಳಿದು ಬಂದ ವಿಶ್ವಾಸಾರ್ಹ ಮಾಹಿತಿಯನ್ವಯ ಸದರಿ ಆರೋಪಿತರ ವಿರುದ್ಧ ರಾಯಚೂರು ಲೋಕಾಯುಕ್ತ ಠಾಣೆ ನಂ13/2010 ರಲ್ಲಿ ದಿನಾಂಕ:30.06.2009 ರಂದು ಕಲಂ 13(1) (ಇ) ಜೊತೆಗೆ 13(2) ರೀತ್ಯಾ ಪ್ರಕರಣವನ್ನು ದಾಖಲು ಮಾಡಿಕೊಂಡು ತನಿಖೆ ಕೈಗೊಂಡಿರುವುದಾಗಿ ತಿಳಿಸಿದ್ದಾರೆ.

ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ನ್ಯಾಯಾಧೀಶರು, ರಾಯಚೂರು ಜಿಲ್ಲೆ ಇವರಿಂದ ದಿನಾಂಕ: 30.06.2009 ರಂದು ಶೋಧನಾ ಆದೇಶವನ್ನು (ಸರ್ಚ್ ವಾರೆಂಟ್) ಪಡೆದುಕೊಂಡು ದಿನಾಂಕ:01.07.2009 ರಂದು ಆರೋಪಿತರು ತಮ್ಮ ಕುಟುಂಬದವರೊಂದಿಗೆ ವಾಸಿಸುತ್ತಿರುವ ಗುಲ್ಬರ್ಗಾ ನಗರದ ಬಡೇಪುರ ಜಯನಗರ ಕಾಲೋನಿಯಲ್ಲಿರುವ ಸರ್ವೆ ನಂ 66 ರಲ್ಲಿರುವ ನಿವೇಶನ ನಂ 81 ರಲ್ಲಿ ಕಟ್ಟಿಸಿರುವ ಮನ ನಂ 2–901/66, ಗುಲ್ಬರ್ಗಾ ಜಿಲ್ಲೆ ಆಳಂದ ತಾಲ್ಲೂಕಿನ ತೀರ್ಥ ಗ್ರಾಮದ ಜಮೀನಿನಲ್ಲಿರುವ ತೋಟದ ಮನೆ, ಗುಲ್ಬರ್ಗಾ ತಾಲ್ಲೂಕಿನ ಮಾದರಸನಹಳ್ಳಿ ಗ್ರಾಮದ ಜಮೀನಿನಲ್ಲಿರುವ ತೋಟದ ಮನೆ ಮತ್ತು ಗೋಡೌನ್ ಮತ್ತು ಆರೋಪಿತರು ಕರ್ತವ್ಯ ನಿರ್ವಹಿಸುವ ಗುಲ್ಬರ್ಗಾ ನಗರದ ಜಂಟಿ ನಿರ್ದೇಶಕರ ಕಛೇರಿ ಜಿಲ್ಲಾ ಕೈಗಾರಿಕಾ ಮತ್ತು ವಾಣಿಜ್ಯ ಕೇಂದ್ರ ಗುಲ್ಬರ್ಗಾ ಕಛೇರಿಯಲ್ಲಿನ ಆರೋಪಿತರ ಛೇಂಬರ್ ಈ ಸ್ಥಳಗಳನ್ನು ಪಂಚ ಸಾಕ್ಷಿಗಳ ಸಮಕ್ಷಮ ಶೋಧನೆ ಮಾಡಿದ್ದು, ಶೋಧನಾ ಕಾಲದಲ್ಲಿ ಕಂಡು ಬಂದ ಚರ ಮತ್ತು ಸ್ಥಿರಾಸ್ತಿ ಅಂದರೆ ಗೃಹೋಪಯೋಗಿ ಉಪಕರಣಗಳು ಚಿನ್ನ ಮತ್ತು ಬೆಳ್ಳಿ, ಬ್ಯಾಂಕ್ ಡಿಪಾಸಿಟ್ ನಗದು ಹಣ ಎಲೆಕ್ಟ್ರಾನಿಕ್ ವಸ್ತುಗಳು, ನಿವೇಶನಗಳು ಮತ್ತು ಜಮೀನುಗಳ ಇವುಗಳಿಗೆ ಸಂಬಂಧಿಸಿದ ದಾಖಲಾತಿಗಳು ಸೇರಿದಂತೆ ವಿವರವಾದ ಪಂಚನಾಮೆಗಳನ್ನು ಮಾಡಿರುವುದಾಗಿ ಅಂತಿಮ ತನಿಖಾ ವರದಿಯಲ್ಲಿ ತಿಳಿಸಿದ್ದಾರೆ.

ನಂತರ ಪ್ರಕರಣವನ್ನು ನ್ಯಾಯಾಲಯದ ವ್ಯಾಪ್ತಿಯನ್ವಯ ಗುಲ್ಬರ್ಗಾ ಲೋಕಾಯುಕ್ತ ಠಾಣೆಗೆ ವರ್ಗಾವಣೆ ಮಾಡಿದ್ದು, ಪ್ರಕರಣವನ್ನು ಗುಲ್ಬರ್ಗಾ ಲೋಕಾಯುಕ್ತ ಠಾಣೆ ಮೊ.ನಂ 10/2010 ರಲ್ಲಿ ದಾಖಲಿಸಿ ತನಿಖೆ ಮುಂದುವರೆಸಿರುತ್ತಾರೆ. ತನಿಖೆಯ ಉದ್ದೇಶಕ್ಕಾಗಿ ಚೆಕ್ ಅವಧಿಯನ್ನು ದಿನಾಂಕ:24.03.1980 ರಿಂದ 01.07.2010 ರವರೆಗೆ ನಿಗದಿಪಡಿಸಲಾಗಿದೆ. ತನಿಖೆಯು ಪೂರ್ಣಗೊಂಡ ನಂತರ ಆರೋಪಿತರ ವಶದಲ್ಲಿದ್ದ ಒಟ್ಟು ಆಸ್ತಿ ಖರ್ಚು ಮತ್ತು ಆದಾಯಗಳ ಒಟ್ಟು ಮೊತ್ತವು ಈ ಕೆಳಗಿನಂತೆ ಇರುತ್ತದೆ.

| | | | |
|---|---|---|---|
| 1 | ಒಟ್ಟು ಆಸ್ತಿಗಳು | ರೂ. | 1,51,18,013–00 |
| 2 | ಒಟ್ಟು ಖರ್ಚುಗಳು | ರೂ. | 56,34,305–00 |
| 3 | ಒಟ್ಟು ಆಸ್ತಿ ಮತ್ತು ಖರ್ಚುಗಳ ಮೊತ್ತ | ರೂ. | 2,07,52,318–00 |
| 4 | ಒಟ್ಟು ಆದಾಯ | ರೂ. | 88,62,731–00 |
| | **ಅಸಮತೋಲನ ಆಸ್ತಿ** | **ರೂ.** | **1,18,89,587–00** |

ಮೇಲ್ಕಂಡ ವಿವರಗಳಿಂದ ಹಾಗೂ ತನಿಖಾ ವರದಿಯಿಂದ ಆರೋಪಿತ ಅಧಿಕಾರಿ ಶ್ರೀ ನೀಲಕಂಠ ರಾಥೋಡ್ ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಗುಲ್ಬರ್ಗಾ ಇವರು ತಮ್ಮ ಎಲ್ಲಾ ಬಲ್ಲ ಮೂಲಗಳ ಆದಾಯಕ್ಕಿಂತ ರೂ 1,18,89,587–00 ರಷ್ಟು ಅಸಮತೋಲನ ಆಸ್ತಿಯನ್ನು ಹೊಂದಿದ್ದು, ಶೇ 134.15 ರಷ್ಟು ಅಕ್ರಮ ಆಸ್ತಿ ಹೊಂದಿರುವುದು ತನಿಖೆಯಿಂದ ಕಂಡು ಬಂದಿದ್ದು, ಆಪಾದಿತರು ಲಂಚ ನಿರೋಧಕ ಕಾಯ್ದೆ 1988 ರ ಕಲಂ 13(1) (ಇ) ಜೊತೆಗೆ 13 (2) ರ ಅಡಿಯಲ್ಲಿ ಅಪರಾಧವೆಸಗಿರುವುದು ಸ್ಪಷ್ಟವಾಗಿ ಕಂಡು ಬರುತ್ತದೆ.

ಆರೋಪಿತರನ್ನು ಲಂಚ ನಿರೋಧ ಕಾಯ್ದೆ 1988 ಕಲಂ 13(1) (ಇ) ಜೊತೆಗೆ 13 (2) ರಡಿಯಲ್ಲಿನ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಜನೆಗೊಳಿಸಲು ಸಾಕಷ್ಟು ಸಾಕ್ಷಿ ಪುರಾವೆಗಳು ಲಭ್ಯವಿರುತ್ತದೆ. ಆದ್ದರಿಂದ ಆರೋಪಿ ನೀಲಕಂಠ ರಾಥೋಡ್, ಜಂಟಿ ನಿರ್ದೇಶಕರು ಜಿಲ್ಲಾ ಕೈಗಾರಿಕಾ ಕೇಂದ್ರ, ಗುಲ್ಬರ್ಗಾ ಇವರು ಮೇಲ್ಕಂಡ ಕಾಯ್ದೆಯಡಿಯಲ್ಲಿ ಅಭಿಯೋಜನೆಗೊಳಿಸಲು ಅರ್ಹರಿರುವುದರಿಂದ ಲಂಚ ನಿರೋಧಕ ಕಾಯ್ದೆ 1988 ರ ಕಲಂ 19 (1) (ಬಿ) ರಲ್ಲಿ ಪ್ರದತ್ತವಾದ ಅಧಿಕಾರದ ಪ್ರಕಾರ ಆರೋಪಿತರನ್ನು ಘನ ನ್ಯಾಯಲಯದಲ್ಲಿ ಅಭಿಯೋಜನೆಗೊಳಿಸಲು ಸಹಿ ಹಾಗೂ ಪದನಾಮದೊಂದಿಗೆ ಅಭಿಯೋಜನಾ ಮಂಜೂರಾತಿ ಆದೇಶವನ್ನು ಹೊರಡಿಸುವಂತೆ ಕೋರಿದ್ದಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 34 ಕೈಸೇವಿ 2014, ಬೆಂಗಳೂರು, ದಿನಾಂಕ: 11.08.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಆರೋಪಿತ ಅಧಿಕಾರಿಯಾದ ಶ್ರೀ. ನೀಲಕಂಠ ರಾಥೋಡ್ ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಗುಲ್ಬರ್ಗಾ (ಪ್ರಸ್ತುತ ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಬೀದರ) ಇವರ ಮೇಲಿನ ಧಾಳಿ ಪ್ರಕರಣದಲ್ಲಿ ಆರೋಪಿತ ಅಧಿಕಾರಿಯು ತಮ್ಮ ಬಲ್ಲ ಮೂಲಗಳ ಆದಾಯಕ್ಕಿಂತ ಹೆಚ್ಚಿನ ಪ್ರಮಾಣದ ಆಸ್ತಿಯನ್ನು ಹೊಂದಿರುವುದು ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ ಹಾಗೂ ಲಂಚ ನಿರೋಧ ಕಾಯ್ದೆ 1988 ಕಲಂ 13.(1) (ಇ) ಜೊತೆಗೆ 13 (2) ರಡಿಯಲ್ಲಿ ಇವರನ್ನು ಹುದ್ದೆಯಿಂದ ತೆಗೆದುಹಾಕುವ ಅಧಿಕಾರವುಳ್ಳ – ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988 ರ ಕಲಂ 19 (1) (ಬಿ) ಅನ್ವಯ ಘನ ನ್ಯಾಯಲಯದಲ್ಲಿ ಅಭಿಯೋಜನೆಗೆ ಗುರಿಪಡಿಸಲು ಸರ್ಕಾರವು ಅಭಿಯೋಜನಾ ಮಂಜೂರಾತಿ ನೀಡಿ ಆದೇಶಿಸಿದೆ.

**ಕರ್ನಾಟಕ ಸರ್ಕಾರದ ವ್ಯವಹಾರ ನಿಯಮಾವಳಿ 1977 ರನ್ವಯ ಈ ಮೇಲ್ಕಂಡ ಆದೇಶವನ್ನು ಈ ಕಛೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ ದಿನಾಂಕ: 11.08.2014 ರಂದು ಹೊರಡಿಸಲಾಗಿದೆ.**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ರೇಣುಕಾರಾಧ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸೇವೆಗಳು)

**PR. 644**
**S.C. 25**

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಆರೋಪಿತರಾದ ಶ್ರೀ ಪಿ.ನಾಗೇಶ್, ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಉಡುಪಿ, ಇವರ ಮೇಲಿನ ಲೋಕಾಯುಕ್ತ ಟ್ರ್ಯಾಪ್ ಪ್ರಕರಣದಲ್ಲಿ ಅಭಿಯೋಜನಾ ಮಂಜೂರಾತಿ ನೀಡುವ ಬಗ್ಗೆ–ಆದೇಶ.

**ಓದಲಾಗಿದೆ :**
1. ಅಪರ ಪೊಲೀಸ್ ಮಹಾ ನಿರ್ದೇಶಕರು ಕರ್ನಾಟಕ ಲೋಕಾಯುಕ್ತ ಇವರ ಪತ್ರ ಸಂಖ್ಯೆ ಲೋಕ್/ಐಎನ್‌ವಿ(ಜಿ)/ಎಂ–3/ಮೊ.ನಂ 1/2014 ಉಡುಪಿ ದಿನಾಂಕ: 16.06.2014.
2. ಅಂತಿಮ ತನಿಖಾ ವರದಿ ಕರ್ನಾಟಕ ಲೋಕಾಯುಕ್ತ ಉಡುಪಿ ಪೊಲೀಸ್ ಠಾಣಾ ಅ.ಕ್ರ. 01/2014 ಕಲಂ 7,13(1)(ಡಿ) ಜೊತೆಗೆ 13(2) ಲಂಚ ನಿರೋಧ ಕಾಯ್ದೆ 1988

**ಪ್ರಸ್ತಾವನೆ:**

ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ(1) ರ ಪ್ರಸ್ತಾವನೆಯಲ್ಲಿ ಆಪಾದಿತರಾದ ಶ್ರೀ ಪಿ.ನಾಗೇಶ್, ಜಂಟಿ ನಿರ್ದೇಶಕರು ಜಿಲ್ಲಾ ಕೈಗಾರಿಕಾ ಕೇಂದ್ರ, ಉಡುಪಿ ಇವರು ಭ್ರಷ್ಟಾಚಾರ ಪ್ರತಿಬಂಧಕ ಕಾಯ್ದೆ 1988ರ ಕಲಂ 7, 13(1)(ಡಿ) ಸಹವಾಚನ 13(2) ರಡಿಯಲ್ಲಿ ಎಸಗಿದ ಶಿಕ್ಷಾರ್ಹ ಅಪರಾಧಗಳು ಸಾಬೀತಾಗಿದ್ದು, ಸದರಿ ಆರೋಪಿತರು ಸಕ್ಷಮ ನ್ಯಾಯಲಯದಲ್ಲಿ ಅಭಿಯೋಜನೆಗೊಳಪಡಲು ಅರ್ಹರಾಗಿದ್ದು, ಅದರಂತೆ ಸದರಿಯವರನ್ನು ಅಭಿಯೋಜನೆಗೊಳಪಡಿಸಲು ಸಕ್ಷಮ ಪ್ರಾಧಿಕಾರಿ, ಅರ್ಥಾತ್ ಆರೋಪಿತರನ್ನು ತನ್ನ ಹುದ್ದೆಯಿಂದ ತೆಗೆದು ಹಾಕುವ/ವಜಾಮಾಡುವ ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಅತ್ಯಗತ್ಯವಾಗಿರುತ್ತದೆ. ಆದ್ದರಿಂದ ಆರೋಪಿತರಾದ ಶ್ರೀ ಪಿ.ನಾಗೇಶ, ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಉಡುಪಿ ಇವರು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988 ರ ಕಲಂ 7, 13(1)(ಡಿ) ಸಹವಾಚನ 13(2) ರಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಅಭಿಯೋಜನೆಗೆ ಒಳಪಡಿಸಲು, ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಭ್ರಷ್ಟಾಚಾರ ನಿರ್ಮೂಲನ ಕಾಯ್ದೆ 1988ರ ಕಲಂ 19(1)(ಬಿ) ರನ್ವಯ ಮಂಜೂರಾತಿಯನ್ನು ನೀಡಲು ಕೋರಲಾಗಿದೆ. ತನಿಖಾ ವರದಿಯ ನೆರಳಚ್ಚು, ಪ್ರಥಮ

ವರ್ತಮಾನ ವರದಿ, ಶೋಧನಾ ಮಹಜರು, ವಶಪಡಿಸಿಕೊಂಡ ದಾಖಲೆಗಳು ಹಾಗೂ ಸಾಕ್ಷಿದಾರರುಗಳ ಹೇಳಿಕೆಗಳ ವಿವರಗಳನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ತನಿಖಾ ಅಂತಿಮ ವರದಿಯಲ್ಲಿ ತಿಳಿಸಲಾಗಿರುತ್ತದೆ.

ಪ್ರಧಾನ ಮಂತ್ರಿಯವರ ಉದ್ಯೋಗ ಸೃಜನ ಕಾರ್ಯಕ್ರಮ ಯೋಜನೆಯಡಿಯಲ್ಲಿ ಕರಕುಶಲ ಲೋಹದ ಉತ್ಪಾದನಾ ಘಟಕ ಪ್ರಾರಂಭಿಸಲು ಫಿರ್ಯಾದುದಾರರಾದ ಶ್ರೀ ಶ್ರೀಕಾಂತ ಆಚಾರ್ಯ, ಸಚ್ಚರಿಪೇಟೆ, ಕಾರ್ಕಳ ತಾಲ್ಲೂಕು, ಉಡುಪಿ ಜಿಲ್ಲೆ ಇವರು ಆರ್ಥಿಕ ನೆರವಿಗಾಗಿ ದಿನಾಂಕ: 26.09.2013 ರಂದು ಅರ್ಜಿ ಸಲ್ಲಿಸಿದ್ದು, ಘಟಕವನ್ನು ಸ್ಥಾಪಿಸಲು ಸರ್ಕಾರದಿಂದ ರೂ 25 ಲಕ್ಷ ನಿಗದಿಯಾಗಿದ್ದು. ಅದರಲ್ಲಿ ಫಿರ್ಯಾದುದಾರರಿಗೆ ರೂ 8,75,000/–ಗಳು ಸಹಾಯಧನ ದೊರೆಯುತ್ತದೆ. ಈ ಸಹಾಯಧನವನ್ನು ಮಂಜೂರು ಮಾಡುವ ಸಲುವಾಗಿ ಆರೋಪಿತ ಅಧಿಕಾರಿಯು ಲಂಚದ ಹಣಕ್ಕೆ ಬೇಡಿಕೆ ಇಟ್ಟಾಗ ಫಿರ್ಯಾದುದಾರರು ರೂ 10.000/– ಹಣ ಕೊಡುವುದಾಗಿ ಒಪ್ಪಿಕೊಂಡು ಸದರಿ ಸಂಭಾಷಣೆಯನ್ನು ತನ್ನ ಮೊಬೈಲ್‌ನಲ್ಲಿ ರೆಕಾರ್ಡ್ ಮಾಡಿಕೊಂಡು, ಲಂಚಕೊಟ್ಟು ಕೆಲಸ ಮಾಡಿಸಿಕೊಳ್ಳುವ ಇಚ್ಛೆ ಇಲ್ಲದ ಕಾರಣ ಉಡುಪಿ ಲೋಕಾಯುಕ್ತ ಠಾಣೆಯಲ್ಲಿ ದೂರು ನೀಡಿರುತ್ತಾರೆ. ಅದರಂತೆ ಸದರಿ ಅಧಿಕಾರಿಯು ದಿನಾಂಕ: 04.02.2014 ರಂದು ತಮ್ಮ ಕಛೇರಿಯಲ್ಲಿ ಫಿರ್ಯಾದುದಾರರಿಂದ ಲಂಚದ ಹಣ ರೂ 10,000/ಗಳನ್ನು ಪಡೆಯುತ್ತಿದ್ದಾಗ ಲೋಕಾಯುಕ್ತರು ದಾಳಿ ನಡೆಸಿ ಇದೇ ದಿನ ಸಂಜೆ 06–10 ಘಂಟೆಗೆ ದಸ್ತಗಿರಿ ಮಾಡಿ ಮಾನ್ಯ ನ್ಯಾಯಲಯಕ್ಕೆ ಹಾಜರುಪಡಿಸಿದ್ದು, ಮಾನ್ಯ ನ್ಯಾಯಲಯವು ಆರೋಪಿತ ಅಧಿಕಾರಿಗೆ ದಿನಾಂಕ: 12.02.2014 ರವರೆಗೆ ನ್ಯಾಯಾಂಗ ಬಂಧನ ವಿಧಿಸಿರುತ್ತದೆ. ನಂತರ ಇವರ ವಿರುದ್ಧ ಗುನ್ನೆ ಸಂಖ್ಯೆ 01/2014 ಆರಕ್ಷಕ ಉಪ ನಿರೀಕ್ಷಕರು ಪೊಲೀಸ್ ವಿಭಾಗ ಕರ್ನಾಟಕ ಲೋಕಾಯುಕ್ತ, ಉಡುಪಿ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ದಾಖಲು ಮಾಡಲಾಗಿದ್ದು ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರಿಗೆ ಸಲ್ಲಿಸಿದ್ದು ಸದರಿ ಆಪಾದಿತರನ್ನು ಭ್ರಷ್ಟಾಚಾರ ಪ್ರತಿಬಂಧಕ ಕಾಯ್ದೆ 1988 ರ ಕಲಂ 7, 13(1)(ಡಿ) ಸಹವಾಚನ 13(2) ರಡಿಯಲ್ಲಿ ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಅಭಿಯೋಜನಾ ಮಂಜೂರಾತಿಗಾಗಿ ಸರ್ಕಾರವನ್ನು ಕೋರಿದ್ದಾರೆ.

ಅಧಿಕೃತ ಜ್ಞಾಪನ ಸಂಖ್ಯೆ:ಡಿಪಿಎಆರ್ 2 ಸೇವಿಇ 98 ದಿ: 26.07.1998 ರಲ್ಲಿ ತಿಳಿಸಿರುವಂತೆ ಸಕ್ಷಮ ಪ್ರಾಧಿಕಾರವು ವಿನೀತ್ ನಾರಾಯಣನ್ ಮತ್ತು ಇತರರು, ಇಂಡಿಯಾ ಯೂನಿಯನ್ ಮತ್ತು ಇತರರು (1997) (10) ಇವರ ರಿಟ್ ಅರ್ಜಿ ಸಂ 340–343/93 ರ ಬಗ್ಗೆ ದಿ: 18.02.1997 ರ ಸರ್ವೋಚ್ಛ ನ್ಯಾಯಾಲಯದ ತೀರ್ಮಾನದಲ್ಲಿ ನಿಗದಿಪಡಿಸಿರುವ ಕಡ್ಡಾಯ ಕಾಲಮಿತಿಯಾದ ಮೂರು ತಿಂಗಳ ಒಳಗಾಗಿ ಅಭಿಯೋಜನಾ ಮಂಜೂರಾತಿಯ ಆದೇಶವನ್ನು ಹೊರಡಿಸಬೇಕು ಎಂದು ತಿಳಿಸಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಆಪಾದಿತರಾದ ಶ್ರೀ ಪಿ.ನಾಗೇಶ್ ಜಂಟಿ ನಿರ್ದೇಶಕರು ಜಿಲ್ಲಾ ಕೈಗಾರಿಕಾ ಕೇಂದ್ರ ಉಡುಪಿ ಜಿಲ್ಲೆ ಇವರ ಮೇಲಿನ ಲೋಕಾಯುಕ್ತ ಟ್ರ್ಯಾಪ್ ಪ್ರಕರಣದಲ್ಲಿ ಇವರನ್ನು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1998 ರ ಕಲಂ 7, 13(1)(ಡಿ) ಸಹವಾಚನ 13(2) ರಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಅಭಿಯೋಜನೆಗೆ ಒಳಪಡಿಸಲು ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಭ್ರಷ್ಟಾಚಾರ ನಿರ್ಮೂಲನ ಕಾಯ್ದೆ 1988ರ ಕಲಂ 19(1)(ಬಿ) ರನ್ವಯ ಆರೋಪಿತರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸಲು ಸಹಿ ಹಾಗೂ ಪದನಾಮದೊಂದಿಗೆ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಹೊಂದಿರುತ್ತದೆ. ಅದರಂತೆ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 32 ಕೈಸೇವಿ 2014, ಬೆಂಗಳೂರು, ದಿನಾಂಕ: 07.08.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಆಪಾದಿತ ಸರ್ಕಾರಿ ಅಧಿಕಾರಿಯಾದ ಶ್ರೀ ಪಿ.ನಾಗೇಶ ಜಂಟಿ ನಿರ್ದೇಶಕರು ಜಿಲ್ಲಾ ಕೈಗಾರಿಕಾ ಕೇಂದ್ರ ಉಡುಪಿ ಜಿಲ್ಲೆ ಇವರು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988 ರ ಕಲಂ 7, 13(1)(ಡಿ) ಸಹವಾಚನ 13(2) ರಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಮನವರಿಕೆಯಾಗಿರುವುದರಿಂದ ಇವರನ್ನು ಹುದ್ದೆಯಿಂದ ತೆಗೆದುಹಾಕುವ/ವಜಾ ಮಾಡುವ ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಭ್ರಷ್ಟಾಚಾರ ನಿರ್ಮೂಲನ ಕಾಯ್ದೆ 1988 ರ ಕಲಂ 19(1)(ಬಿ) ರಡಿ ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಅಭಿಯೋಜನಾ ಮಂಜೂರಾತಿ ನೀಡಿ ಆದೇಶಿಸಿದೆ.

ಕರ್ನಾಟಕ ಸರ್ಕಾರದ ವ್ಯವಹಾರ ನಿಯಮಾವಳಿ 1977 ರನ್ವಯ ಈ ಮೇಲ್ಕಂಡ ಆದೇಶವನ್ನು ಈ ಕಛೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ ದಿನಾಂಕ: 07.08.2014 ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ರೇಣುಕಾರಾಧ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸೇವೆಗಳು)

PR. 645
S.C. 25

## ಇಂಧನ ಸಚಿವಾಲಯ

**ವಿಷಯ :** ಸೌರ ನೀತಿ 2014–21ರ ಅನುಷ್ಠಾನ, ಭೂಮಾಲೀಕತ್ವವುಳ್ಳ ರೈತರ ಮೂಲಕ ವಿಕೇಂದ್ರಿಕೃತ ವಿದ್ಯುತ್ ಉತ್ಪಾದನೆಯ ಯೋಜನೆಗಳನ್ನು ಉತ್ತೇಜಿಸಲು ಮಾರ್ಗಸೂಚಿಗಳು.

**ಓದಲಾಗಿದೆ :** ಸೌರನೀತಿ 2014–21 ಅಧಿಸೂಚನೆ ಸಂಖ್ಯೆ: ಇಎನ್21 ವಿಎಸ್‌ಸಿ 2014 ದಿನಾಂಕ: 22.05.2014

**ಪ್ರಸ್ತಾವನೆ :**

ಸೌರ ವಿದ್ಯುತ್ ಪ್ರಸ್ತುತ ವಿದ್ಯುತ್ ಮೂಲವನ್ನು ವೃದ್ಧಿಸಲು ಒಂದು ಪರ್ಯಾಯ ವ್ಯವಸ್ಥೆಯನ್ನಾಗಿ ಪರಿಗಣಿಸಲಾಗಿದೆ. ಸೌರ ವಿದ್ಯುಚ್ಛಕ್ತಿಯು ಒಂದು ಹಸಿರು ಇಂಧನ ಮೂಲವಾಗಿದೆ ಮತ್ತು ಸೌರಶಕ್ತಿಯ ಸಂಭಾವನೀಯ ಸಾಮರ್ಥ್ಯವನ್ನು ಬಳಸಿಕೊಳ್ಳಲು, ಸರ್ಕಾರವು ಸೌರ ನೀತಿ 2011–16 ಅನ್ನು ಪರಿಷ್ಕರಿಸಿ ಮೇಲೆ ಓದಲಾದ ಪರಿಷ್ಕೃತ ಸೌರ ನೀತಿ 2014–21 ಅನ್ನು ಹೊರಡಿಸಿದೆ.

ಸೌರ ನೀತಿ 2014–21ನ್ನು ಪರಿಣಾಮಕಾರಿಯಾಗಿ ಅನುಷ್ಠಾನಕ್ಕೆ ತರಲು, ವಿಶೇಷವಾಗಿ ಸೌರ ನೀತಿಯ ಕಲಂ 8, ಪ್ರವರ್ಗ 1, ವರ್ಗ 1ರ ಅಡಿಯಲ್ಲಿ, ರಾಜ್ಯದಲ್ಲಿ ಭೂ ಮಾಲೀಕತ್ವದ ರೈತರ ಭೂಮಿಯನ್ನು ಬಳಸಿ ವಿಕೇಂದ್ರಿಕೃತ ವಿದ್ಯುತ್ ಉತ್ಪಾದನೆಯನ್ನು ಉತ್ತೇಜಿಸುವ ಸಲುವಾಗಿ ಯೋಜನೆಗಳನ್ನು ಹಂಚಿಕೆ ಮಾಡಲು ಸರ್ಕಾರದಿಂದ ಮಾರ್ಗಸೂಚಿಗಳನ್ನು ನೀಡಲು ವ್ಯವಸ್ಥಾಪಕ ನಿರ್ದೇಶಕರು, ಗುಲ್ಬರ್ಗಾ ವಿದ್ಯುಚ್ಛಕ್ತಿ ಸರಬರಾಜು ಕಂಪನಿರವರು ಪತ್ರ ಸಂಖ್ಯೆ:

GESCOM/CEE(CP)/SEE (MIS) EE (RA)/14-15/11 589-94 ದಿನಾಂಕ: 20.6.2014ರಲ್ಲಿ ಕೋರಿರುತ್ತಾರೆ. ಈ ಸಂಬಂಧವಾಗಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ(ಕ್ರೆಡಲ್) ರವರು ಈ ವರ್ಗಕ್ಕೆ ಸಂಬಂಧಿಸಿದಂತೆ ಯೋಜನೆಗಳಿಗೆ ಕರಡು ಮಾರ್ಗಸೂಚಿಗಳನ್ನು ಹೊರಡಿಸಲು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಕ್ರೆಡಲ್‌ರವರು ಪ್ರಸ್ತಾವನೆಯನ್ನು ಸಲ್ಲಿಸಿರುವುದರಿಂದ, ಈ ವರ್ಗದ ಯೋಜನೆಗಳಿಗೆ ವಿದ್ಯುತ್ ವಿತರಣಾ ಕಂಪನಿಗಳು ಮತ್ತು ಕ್ರೆಡಲ್‌ರವರು ಅನುಸರಿಸಬೇಕಾದ ಮಾರ್ಗಸೂಚಿಗಳನ್ನು ಸರ್ಕಾರವು ಈ ಕೆಳಗಿನಂತೆ ಹೊರಡಿಸಲು ಉದ್ದೇಶಿಸಿದೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ:

**ಸರ್ಕಾರದ ಆದೇಶ ಸಂಖ್ಯೆ: ಇಎನ್ 62 ವಿಎಸ್‌ಸಿ 2014, ಬೆಂಗಳೂರು, ದಿನಾಂಕ: 26.08.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ವಿದ್ಯುತ್ ವಿತರಣಾ ಕಂಪನಿಗಳು ಮತ್ತು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತರವರು ಸೌರ ನೀತಿ 2014–21ರ ಕಲಂ 8, ಪ್ರವರ್ಗ1, ವರ್ಗ 1ರ ಅಡಿಯಲ್ಲಿ ಯೋಜನೆಗಳನ್ನು ಅನುಷ್ಠಾನಗೊಳಿಸಲು ಸರ್ಕಾರವು ಈ ಕೆಳಕಂಡ ಮಾರ್ಗಸೂಚಿಗಳನ್ನು ಹೊರಡಿಸುತ್ತದೆ:

1. ಕೃಷಿ ಭೂಮಿ ಮಾಲೀಕತ್ವ ಹೊಂದಿರುವವರು ಈ ವರ್ಗದಡಿಯಲ್ಲಿ ಹಂಚಿಕೆಗೆ ಅರ್ಜಿ ಸಲ್ಲಿಸಲು ಅರ್ಹರಾಗಿರುತ್ತಾರೆ.
2. ಸೌರ ನೀತಿ 2014–21ರ ಅವಧಿಗೆ ಈ ವರ್ಗದಡಿಯಲ್ಲಿ ಒಟ್ಟು ಕಾಯ್ದಿರಿಸಲಾದ ಗರಿಷ್ಠ ಸಾಮರ್ಥ್ಯ 300 MWp.
3. ಸಂಶೋಧನೆ ಮತ್ತು ಅಭಿವೃದ್ಧಿಯನ್ನು ಪ್ರೋತ್ಸಾಹಿಸುವ ನಿಟ್ಟಿನಲ್ಲಿ, ಈ 300 MWp ಸಾಮರ್ಥ್ಯದಲ್ಲಿ ಶೇ.3 ರಷ್ಟು ಅಂದರೆ 9MWp ರಷ್ಟನ್ನು ಭೂ ಮಾಲೀಕತ್ವ ಹೊಂದಿರುವ ಮತ್ತು ವಿದ್ಯಾ ಸಂಸ್ಥೆಗಳನ್ನು ಹೊಂದಿರುವ ವಿಶ್ವವಿದ್ಯಾನಿಲಯಗಳು, ಚಾರಿಟಬಲ್ ಸಂಸ್ಥೆಗಳು, ಟ್ರಸ್ಟ್ ಮತ್ತು ಸೊಸೈಟಿಗಳಿಗೆ ಹಂಚಿಕೆ ಮಾಡಲು ಕಾಯ್ದಿರಿಸಲಾಗಿದೆ.
4. ವಿದ್ಯುತ್ ವಿತರಣಾ ಕಂಪನಿವಾರು ಹಂಚಿಕೆ ಈ ಕೆಳಕಂಡಂತಿದೆ:

| ಕ್ರ ಸಂ. | ವಿಸಕಂ | ಕ್ರಸಂ 3ಕ್ಕೆ ಶೇ.3ರಷ್ಟು ಮೀಸಲಾತಿ | ಪರಿಶಿಷ್ಟ ಜಾತಿ ಭೂ ಮಾಲೀಕರು (ಸಾಮರ್ಥ್ಯ MWp ಗಳಲ್ಲಿ) | ಪರಿಶಿಷ್ಟ ಪಂಗಡ ಭೂ ಮಾಲೀಕರು (ಸಾಮರ್ಥ್ಯ MWp ಗಳಲ್ಲಿ) | ಸಾಮಾನ್ಯ ವರ್ಗದ ಭೂ ಮಾಲೀಕರು (ಸಾಮರ್ಥ್ಯ MWp ಗಳಲ್ಲಿ) |
|---|---|---|---|---|---|
| **1** | ಬೆವಿಕಂ | **9 MWp** | 24 | 10 | 106 |
| **2** | ಮವಿಕಂ | – | 4 | 2 | 17 |
| **3** | ಹುವಿಕಂ | – | 10 | 4 | 44 |
| **4** | ಗುವಿಕಂ | – | 7 | 3 | 28 |
| **5** | ಚಾವಿಸನಿನಿ | – | 5 | 2 | 25 |
| ಒಟ್ಟು | | **9** | **50** | **21** | **220** |

5. ಈ ವರ್ಗದಡಿಯಲ್ಲಿ ಪ್ರತಿ ಅರ್ಜಿದಾರರಿಗೆ ಕನಿಷ್ಠ ಸಾಮರ್ಥ್ಯವು 1 MWp ಹಾಗೂ ಗರಿಷ್ಠ ಸಾಮರ್ಥ್ಯವು 3 MWp ಆಗಿರುತ್ತದೆ.
6. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು, ವಿದ್ಯುತ್ ವಿತರಣಾ ಕಂಪನಿಗಳ ಪರವಾಗಿ 1 ರಿಂದ 3 MWp ಸಾಮರ್ಥ್ಯದ ಸೋಲಾರ್ ಪವರ್ ಘಟಕಗಳನ್ನು ಸ್ಥಾಪಿಸಲು ಅರ್ಜಿಗಳನ್ನು ಆನ್‌ಲೈನ್ ವ್ಯವಸ್ಥೆಯ ಮೂಲಕ ಸಲ್ಲಿಸಲು ಆಹ್ವಾನಿಸುವುದು.
7. ಭೂ ಹಿಡುವಳಿ/ಜಂಟಿ ಹಿಡುವಳಿಯ ಸಾಕ್ಷಿಯಾಗಿ ಪಹಣಿ (RTC)/ಮಾರಾಟ ಪತ್ರ ಹೊಂದಿರುವ ಅರ್ಜಿದಾರರು, ಈ ವರ್ಗದಡಿಯಲ್ಲಿ ಅರ್ಜಿ ಸಲ್ಲಿಸಲು ಅರ್ಹರಾಗಿರುತ್ತಾರೆ. ಅರ್ಜಿದಾರರು ತಾವು ಸಲ್ಲಿಸಿರುವ ಅರ್ಜಿ ಸಾಮರ್ಥ್ಯಕ್ಕೆ ಅಗತ್ಯವಿರುವ ಒಟ್ಟು ಭೂಮಿ ಒಡೆತನದ ದಾಖಲೆಗಳನ್ನು ಒದಗಿಸಬೇಕಾಗಿರುತ್ತದೆ. (1MWp ಗೆ ಸುಮಾರು 5 ಎಕರೆ ಬೇಕಾಗಬಹುದೆಂದು ಅಂದಾಜಿಸಲಾಗಿದೆ) ಎಲ್ಲಾ ಅರ್ಜಿದಾರರು ಪಹಣಿ (RTC) ಯನ್ನು ಭೂ ಹಿಡುವಳಿಯ ಪುರಾವೆಯನ್ನಾಗಿ ಒದಗಿಸಬೇಕಿದೆ.
8. ಭೂ ಹಿಡುವಳಿಯನ್ನು ಜಂಟಿಯಾಗಿ ಹೊಂದಿದ್ದ ಸಂದರ್ಭದಲ್ಲಿ, ಪ್ರತಿ ಜಂಟಿಧಾರಕರು ಕನಿಷ್ಠ 1 MWp ರಿಂದ 3 MWp ಸಾಮರ್ಥ್ಯಕ್ಕೆ ಬೇಕಾದ ಅಗತ್ಯ ಭೂಮಿಯನ್ನು ಹೊಂದಿದ್ದಲ್ಲಿ ಪ್ರತ್ಯೇಕವಾಗಿ ಅರ್ಜಿ ಸಲ್ಲಿಸಲು ಅರ್ಹರಾಗಿರುತ್ತಾರೆ.
9. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ 15 ದಿನಗಳ ನಂತರ ಅರ್ಜಿಗಳನ್ನು ಸ್ವೀಕರಿಸಲಾಗುವುದು.
10. ಪ್ರತಿ ವಿತರಣಾ ಕಂಪನಿಗಳಿಗೆ ಹಂಚಿಕೆ ಮಾಡಿರುವ ಪ್ರಮಾಣಕ್ಕಿಂತ ಎರಡರಷ್ಟು ಮಟ್ಟಿಗೆ ಅರ್ಜಿಗಳನ್ನು ಸ್ವೀಕರಿಸಲಾಗುವುದು.
11. ಪ್ರತಿ MWp ಗೆ ಅರ್ಜಿ ಶುಲ್ಕವಾದ ರೂ. 11,236/– (ರೂ. 10,000+12.36% ಸೇವಾ ಶುಲ್ಕ) (ಮರುಪಾವತಿಸಲಾಗದು)ವನ್ನು ಆಯಾ ವಿತರಣಾ ಕಂಪನಿಗಳಿಗೆ ಪಾವತಿಸುವುದು.
12. ಆನ್‌ಲೈನ್ ಅರ್ಜಿ ಸಲ್ಲಿಸಿದ 8 ದಿನದೊಳಗೆ ಅರ್ಜಿ ಶುಲ್ಕದ ಡಿ.ಡಿ. ಯೊಂದಿಗೆ, RTC/ದೃಢೀಕೃತ ಮಾರಾಟ ಪತ್ರ ಹಾಗೂ ಜಾತಿ ಪ್ರಮಾಣ ಪತ್ರ (ಅಗತ್ಯವಿದ್ದೆಡೆ) ದೊಂದಿಗೆ ಸಂಬಂಧಪಟ್ಟ ವಿದ್ಯುತ್ ವಿತರಣಾ ಕಂಪನಿಗಳಿಗೆ ಸಲ್ಲಿಸುವುದು. ಮೂಲ ಡಿ.ಡಿ. ಮತ್ತು ದಾಖಲಾತಿಗಳು ನಿಗದಿತ 8 ದಿನಗಳೊಳಗಾಗಿ ಸ್ವೀಕೃತಿಯಾಗದೇ ಇದ್ದಲ್ಲಿ ಅರ್ಜಿಯು ರದ್ದಾಗುತ್ತದೆ. ಅಂಚೆ ವಿಳಂಬಕ್ಕೆ ವಿದ್ಯುತ್ ವಿತರಣಾ ಕಂಪನಿಗಳು ಜವಾಬ್ದಾರಿಯಾಗಿರುವುದಿಲ್ಲ.

13. ವಿದ್ಯುತ್ ವಿತರಣಾ ಕಂಪನಿಗಳು ಅರ್ಜಿಗಳ ಹಾಗೂ ಮೂಲ ದಾಖಲಾತಿಗಳನ್ನು ಪರಿಶೀಲಿಸಿ, ಅರ್ಜಿಗಳನ್ನು ಎಲ್ಲಾ ದಾಖಲಾತಿಗಳೊಂದಿಗೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಗೆ ಯೋಜನೆಯ ಹಂಚಿಕೆಗಾಗಿ ಕಳುಹಿಸಿಕೊಡುವುದು.

14. ವಿದ್ಯುತ್ ವಿತರಣಾ ಕಂಪನಿವಾರು ಹಂಚಿಕೆಯನ್ನು ಆನ್‌ಲೈನ್‌ನಲ್ಲಿ ಅರ್ಜಿ ನೋಂದಾಯಿಸಿದ ಸಮಯ ಮತ್ತು ದಿನಾಂಕದ ಆಧಾರದ ಮೇಲೆ, ಅರ್ಹತೆಗೆ ಒಳಪಟ್ಟು, ಮೊದಲು ಬಂದವರಿಗೆ ಮೊದಲಂತೆ ಆದ್ಯತೆ ನೀಡಿ, ಹಂಚಿಕೆ ಮಾಡಲಾಗುವುದು. ಅರ್ಹ ಅರ್ಜಿದಾರರ ಪಟ್ಟಿಯನ್ನು ಜ್ಯೇಷ್ಠತೆಯ ಆಧಾರದ ಮೇಲೆ ತಯಾರಿಸಿ ನಿರ್ವಹಿಸುವುದು.

15. ಹಂಚಿಕೆಯಾದ 60 ದಿನಗಳೊಳಗಾಗಿ, ಹಂಚಿಕೆಯನ್ನು ಪಡೆದ ಅರ್ಜಿದಾರರು, ಕೃಷಿ ಭೂ ಹಿಡುವಳಿಯ ಪುರಾವೆಯಾಗಿ ಪಹಣಿಯನ್ನು, ಸಂಸ್ಕರಣಾ ಶುಲ್ಕ ಪ್ರತಿ MWp ಗೆ ರೂ. 1,12,360/– (ರೂ. 1,00,000+12.36% ಸೇವಾ ಶುಲ್ಕ) (ಮರುಪಾವತಿಯಾಗದು) ನಂತೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸತಕ್ಕದು. ಹಂಚಿಕೆಯಾದ ಅರ್ಜಿದಾರರು, ಹಂಚಿಕೆಯ ಸೂಚನೆಯ ದಿನಾಂಕದಿಂದ 60 ದಿನಗಳೊಳಗಾಗಿ ಪಹಣಿ ಮತ್ತು ಸಂಸ್ಕರಣಾ ಶುಲ್ಕವನ್ನು ಸಲ್ಲಿಸಲು ವಿಫಲರಾದಲ್ಲಿ, ಹಂಚಿಕೆಯು ರದ್ದಾಗುವುದು ಮತ್ತು ಜ್ಯೇಷ್ಠತೆಯ ಆಧಾರದ ಮೇಲೆ ಯೋಜನೆಯನ್ನು ಮುಂದಿನ ಅರ್ಹ ಅರ್ಜಿದಾರರಿಗೆ ಹಂಚಿಕೆ ಮಾಡಲಾಗುವುದು.

16. ಯಶಸ್ವಿ ಅರ್ಜಿದಾರರು, ಪ್ರತಿ MWp ಗೆ ರೂ. 10 ಲಕ್ಷದಂತೆ ನಿರ್ವಹಣೆ ಬ್ಯಾಂಕ್ ಗ್ಯಾರಂಟಿ(Performance Bank Guarantee) ಯನ್ನು ಸಂಬಂಧಪಟ್ಟ ವಿದ್ಯುತ್ ವಿತರಣಾ ಕಂಪನಿಗಳಿಗೆ ನೀಡಿ, 25 ವರ್ಷಗಳಿಗೆ ಕೆ.ಇ.ಆರ್.ಸಿ ರವರು ಕಾಲಕಾಲಕ್ಕೆ ನಿಗಧಿಪಡಿಸಿದ ದರದಂತೆ ವಿದ್ಯುತ್ ಖರೀದಿ ಒಪ್ಪಂದವನ್ನು ಮಾಡಿಕೊಳ್ಳುವುದು.

17. ಅಬಕಾರಿ ಸುಂಕ ಮತ್ತು ಕಸ್ಟಮ್ಸ್ ಸುಂಕ ವಿನಾಯಿತಿಗಳ ಸೌಲಭ್ಯವನ್ನು ಪಡೆಯಲು, ಕ್ರೆಡಲ್‌ರವರು ಆಗ್ಗಿಂದಾಗೆ ಸ್ವೀಕೃತಿಯಾಗುವ ಪ್ರಸ್ತಾವನೆಗಳನ್ನು ಕೇಂದ್ರದ ನವ ಮತ್ತು ನವೀಕರಿಸಬಹುದಾದ ಇಂಧನ ಮಂತ್ರಾಲಯರವರಿಗೆ ಕಳುಹಿಸಿಕೊಡುವುದು.

18. ಯಶ್ವಸಿ ಅರ್ಜಿದಾರರು, ಯೋಜನೆಯು ಹಂಚಿಕೆಯಾದ ದಿನಾಂಕದಿಂದ 18 ತಿಂಗಳುಗಳೊಳಗಾಗಿ ಯೋಜನೆಯನ್ನು ಅನುಷ್ಠಾನಗೊಳಿಸುವುದು. ಒಂದು ವೇಳೆ ನಿಗಧಿತ ಸಮಯದಲ್ಲಿ ಯೋಜನೆಯನ್ನು ಅನುಷ್ಠಾನಗೊಳಿಸಲು ವಿಫಲರಾದಲ್ಲಿ ಹಂಚಿಕೆಯು ರದ್ದಾಗುವುದು ಮತ್ತು ನಿರ್ವಹಣೆ ಬ್ಯಾಂಕ್ ಗ್ಯಾರಂಟಿಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

19. ಇತರೆ ಸಾಮಾನ್ಯ ನಿಯಮಗಳು ಮತ್ತು ಷರತ್ತುಗಳು ಸೌರ ನೀತಿ 2014–21ರ ಪ್ರಕಾರ ಇರುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಎಲ್.ರಾಮಚಂದ್ರ**
ಸರ್ಕಾರದ ಉಪ ಕಾರ್ಯದರ್ಶಿ,
ಇಂಧನ ಇಲಾಖೆ

## ENERGY SECRETARIAT

Sub : Implementation of Solar Policy 2014-21, guidelines for projects to promote distributed generation by land owning farmers.

Read : Solar Policy 2014-21 vide Notification No EN 21VSC2014 Dtd: 22.05.2014.

**PREAMBLE :**

Solar power is considered as one of the alternate to augment the current source, as it is a green source of Energy and to harness the potential of Solar Energy, Government has revised the Solar Policy 2011-16 and revised Solar policy 2014-21 read above is notified.

In order to effectively implement the Solar Policy 2014-21, especially with respect to the allotment of projects to promote distributed generation by land owning farmers-throughout the State under Clause 8, Segment 1, Category 1 of Solar Policy, guidelines from Government were sought from Managing Director, GESCOM vide letter MD GESCOM Letter No. GESCOM/CEE (CP)/SEE (MIS) EE (RA)/14-15/11 589-94 Dtd: 20.06.2014. The Managing DIrector, KREDL had sent proposal to issue draft guidelines. In view of the proposal submitted by KREDL, Government intends to issue the following guidelines to be adopted by the ESCOMs and KREDL under the said Category.

After detailed examination of the proposal, the following orders are issued:

### GOVERNMENT ORDER NO. EN 62 VSC 2014 Bangalore Dated: 26.08.2014.

Under the circumstances explained in the preamble, Government issues the following set of guidelines to be adopted by the ESCOMs and KREDL for implementation of Clause 8, Segment 1, Category 1 of Solar Policy 2014-21.

1. The agricultural land owners are eligible for applying for allotment under this category.
2. The total maximum capacity reserved under this category is 300MWp for the policy period 2014-21.
3. Out of this 300MWp, 3% i.e. to an extent of 9MWp. is reserved for allotment to land owning Universities, Charitable Institutions, Trusts and Societies which have educational institutions, to facilitate and encourage research and development activities.

4. The ESCOM wise allocation is as tabled below:

| SL No. | ESCOMs | 3% Reservation for SL No. 3 | SC Land owners (Capacity in MWp) | ST land owners (Capacity in MWp) | General category land owners (Capacity in MWp) |
|---|---|---|---|---|---|
| 1 | BESCOM | 9MWp | 24 | 10 | 106 |
| 2 | MESCOM | _ | 4 | 2 | 17 |
| 3 | HESCOM | _ | 10 | 4 | 44 |
| 4 | GESCOM | _ | 7 | 3 | 28 |
| 5 | CESC | _ | 5 | 2 | 25 |
| **Total** | | **9** | **50** | **21** | **220** |

5. The minimum capacity is 1M.Wp and maximum is 3 MWp under this category for each applicant.
6. KREDL, on behalf of ESCOMs, shall notify inviting applications through online application for setting up Solar Power plants of capacity 1 to 3 MWp.
7. The applicant having RTC/Sale deed are eligible to apply under this category as a proof of land holding / joint holding. The applicant has to furnish the documents of total required land for his applied capacity. (Thumb rule approximately 5 acres for 1 MWp). All applicants have to furnish RTC in proof of land holding.
8. If the land holding is held jointly each of the joint holder is individually eligible to apply for minimum 1MWP to maxium 3MWp depending upon the extent of required land.
9. Applications will be received after 15 days from the date of notification by KREDL.
10. The applications to an extent of twice the quantity allotted to each ESCOM will be received.
11. The application fee of Rs 11,236/-per MWp (Rs10,000+12.36%ST) (Non Refundable) to be paid to the respective ESCOM.
12. The original DD for application fee along with the RTC/certified copy of the sale deed and caste certificate if applicable, shall be submitted to respective ESCOMs within 8 days from the date of submission of online application. If the original DD and other documents are not received within 8 days, the application will be treated as cancelled. ESCOMs will not be responsible for postal delays.
13. ECSOMS will scrutinize the application and verify the original documents and send it with all documents to KREDL for allotment.
14. ECSOMS wise allotment shall be made on first come first served basis on the basis of date and time of online submission of application, subject to eligibility. A list of all eligible applicants have to be prepared and operated as per seniority.
15. Within 60 days of allotment, the allottee has to furnish RTC in proof of agricultural land holding along with a processing fee of Rs. 1,12,360/-per MWp (Rs. 1,00,000+12.36% ST) (Non refundable) to KREDL. If the allottee fails to produce RTC and processing fee within 60 days from the date of intimation of allotment the allotment stands cancelled and project will be allotted to the next eligible applicant on seniority.
16. The successful applicant has to produce performance Bank guarantee of Rs. 10 lakh per MWP to respective ESCOMS and enter into PPA at the rate determined by KERC from time to time for a period of 25 years.
17. KREDL will forward the proposals as and when received to MNRE for extending Excise & Customs duty benefits.
18. The allottee has to complete the project within 18 months from the date of allotment, failing which the allotment will be cancelled and the performance guarantee will be forfeited.
19. Other general terms and conditions will be as per Solar policy 2014-21.

By Order and in the Name of the Governor of Karnataka,

**PR. 700**

**K.L. RAMACHANDRA**

Deputy Secretary to Government,

Energy Department

## ಕಾರ್ಮಿಕ ಸಚಿವಾಲಯ

**ವಿಷಯ :** ಸಕ್ಕರೆ ಉದ್ದಿಮೆಯ ಕಾರ್ಮಿಕರ ತ್ರಿಪಕ್ಷೀಯ ವೇತನ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಕಾಇ 106 ಎಲ್ಎಂಡಬ್ಲ್ಯೂ 2009, ದಿನಾಂಕ: 21-11-2009.

2. ಕಾರ್ಮಿಕ ಆಯುಕ್ತರ ಪತ್ರದ ಸಂಖ್ಯೆ:ಕವೇಕಾ-1/ಸಿಆರ್-12/2014-15, ದಿನಾಂಕ: 22/23-07-2014

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ದಿನಾಂಕ: 21.11.2009ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ಷುಗರ್ಸ್ ವರ್ಕ್‌ರ್ಸ್ ಫೆಡರೇಷನ್,[ರಿ] ಬೆಂಗಳೂರು ಇವರ ವಿವಿಧ ಬೇಡಿಕೆಗಳ ಬಗ್ಗೆ ಪರಿಶೀಲಿಸಿ ತನ್ನ ಶಿಫಾರಸ್ಸುಗಳನ್ನು ಒಳಗೊಂಡಂತೆ ವರದಿಯನ್ನು ನೀಡುವಂತೆ ಸರ್ಕಾರವು ತ್ರಿಪಕ್ಷೀಯ ವೇತನ ಸಮಿತಿಯನ್ನು ರಚಿಸಲಾಗಿದೆ. ಸಕ್ಕರೆ ಉದ್ದಿಮೆಯ ಕಾರ್ಮಿಕರ ವೇತನ ಪರಿಷ್ಕರಣೆ ಹಾಗೂ ಇತರೆ ಬೇಡಿಕೆಗಳಿಗೆ ಸಂಬಂಧಿಸಿದಂತೆ ಕೈಗಾರಿಕಾ ವಿವಾದಗಳ ಕಾಯ್ದೆ 1947ರ ಕಲಂ 12[3]ರಂತೆ ಒಪ್ಪಂದ ಏರ್ಪಟ್ಟಿದ್ದು. ಈ ಒಪ್ಪಂದದ ಅವಧಿಯು ದಿನಾಂಕ:31.03.2014ಕ್ಕೆ ಅಂತ್ಯಗೊಂಡಿರುವುದರಿಂದ, ಸದರಿ ನೌಕರರಿಗೆ ಸಂಬಂಧಿಸಿದಂತೆ ತ್ರಿಪಕ್ಷೀಯ ವೇತನ ಸಮಿತಿಯನ್ನು ರಚಿಸಲು ಉದ್ದೇಶಿಸಲಾಗಿದೆ.

ಮೇಲೆ [2]ರ ದಿನಾಂಕ: 23.07.2014ರ ಪತ್ರದಲ್ಲಿ ಕಾರ್ಮಿಕ ಆಯುಕ್ತರು ಸಕ್ಕರೆ ಉದ್ದಿಮೆಯ ಕಾರ್ಮಿಕರ ತ್ರಿಪಕ್ಷೀಯ ವೇತನ ಸಮಿತಿಯನ್ನು ರಚಿಸುವ ಸಲುವಾಗಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದಾರೆ.

ಕಾರ್ಮಿಕ ಆಯುಕ್ತರು, ಬೆಂಗಳೂರು ಹಾಗೂ ಕರ್ನಾಟಕ ಷುಗರ್ ವರ್ಕರ್ಸ್ ಫೆಡರೇಷನ್[ರಿ], ಬೆಂಗಳೂರು, ಇವರ ಪ್ರಸ್ತಾವನೆ ಹಾಗೂ ಮನವಿಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 85 ಎಲ್‌ಡಬ್ಲ್ಯೂಎ 2014, ಬೆಂಗಳೂರು, ದಿನಾಂಕ: 12.09.2014**

ಅಧ್ಯಕ್ಷರು, ಕರ್ನಾಟಕ ಷುಗರ್ ವರ್ಕರ್ಸ್ ಫೆಡರೇಷನ್ [ರಿ] ಬೆಂಗಳೂರು ಇವರ ದಿನಾಂಕ: 21.07.2014ರ ವಿವಿಧ ಬೇಡಿಕೆಗಳ ಬಗ್ಗೆ ಪರಿಶೀಲಿಸಿ ತನ್ನ ಶಿಫಾರಸ್ಸುಗಳನ್ನು ಒಳಗೊಂಡ ವರದಿಯನ್ನು ನೀಡಲು ಈ ಕೆಳಕಂಡಂತೆ ತ್ರಿಪಕ್ಷೀಯ ವೇತನ ಸಮಿತಿಯನ್ನು ರಚಿಸಲಾಗಿದೆ.

| | | |
|---|---|---|
| 1. | ಮಾನ್ಯ ಕಾರ್ಮಿಕ ಸಚಿವರು– | ಅಧ್ಯಕ್ಷರು |
| 2. | ಮಾನ್ಯ ಸಕ್ಕರೆ ಸಚಿವರು– | ಉಪಾಧ್ಯಕ್ಷರು |
| 3. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ/ ಸರ್ಕಾರದ ಪ್ರಧಾನ ಕಾರ್ಯದರ್ಶಿ/ ಸರ್ಕಾರದ ಕಾರ್ಯದರ್ಶಿ, ಕಾರ್ಮಿಕ ಇಲಾಖೆ, | ಸದಸ್ಯರು |
| 4. | ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ನಿರ್ದೇಶಕರು (ಸಕ್ಕರೆ)– | ಸದಸ್ಯರು |
| 5. | ಕಾರ್ಮಿಕ ಆಯುಕ್ತರು, | |
| 6. | ಅಧ್ಯಕ್ಷರು, ದಕ್ಷಿಣ ಭಾರತ, ಸಕ್ಕರೆ ತಯಾರಿಕೆ ಸಂಘ– | ಸದಸ್ಯರು |
| 7. | ಅಧ್ಯಕ್ಷರು, ಕರ್ನಾಟಕ ಸಹಕಾರಿ ಸಕ್ಕರೆ ಕಾರ್ಖಾನೆಗಳ ಫೆಡರೇಷನ್ | ಸದಸ್ಯರು |
| 8. | ಅಧ್ಯಕ್ಷರು, ಕರ್ನಾಟಕ ಸಕ್ಕರೆ ಕಾರ್ಮಿಕರ ಫೆಡರೇಷನ್, ಬೆಂಗಳೂರು | ಸದಸ್ಯರು |
| 9. | ಅಪರ ಕಾರ್ಮಿಕ ಆಯುಕ್ತರು (ಆಡಳಿತ) | ಸದಸ್ಯ ಕಾರ್ಯದರ್ಶಿ, |

ಈ ಸಮಿತಿಯು ತನ್ನ ವರದಿಯನ್ನು 3 ತಿಂಗಳ ಒಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**PR.701**
**SC- 200**

**ಪಿ. ನಾಗರತ್ನಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಕಾರ್ಮಿಕ ಇಲಾಖೆ

## ಶಿಕ್ಷಣ ಸಚಿವಾಲಯ

**ವಿಷಯ :** ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರು ನಡೆಸುತ್ತಿರುವ ಡಾ:ಅಂಬೇಡ್ಕರ್ ಪ್ರಥಮ ದರ್ಜೆ ಕಲಾ ಕಾಲೇಜು, ರಂಗಂಪೇಟ, ಸುರಪುರ ಈ ಕಾಲೇಜು ಹಾಗೂ ಅಲ್ಲಿನ ಬೋಧಕ/ಬೋಧಕೇತರರ ಹುದ್ದೆಗಳನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರಿ ಅಧಿಸೂಚನೆ ಸಂಖ್ಯೆ:ಇಡಿ 551 ಯುಪಿಸಿ 99 ದಿನಾಂಕ: 07–08–2003.
2. ಸರ್ಕಾರಿ ಅಧಿಸೂಚನೆ ಸಂಖ್ಯೆ:ಇಡಿ 30 ಯುಪಿಸಿ 2008, ದಿನಾಂಕ: 13–05–2009
3. ಸರ್ಕಾರಿ ಅಧಿಸೂಚನೆ ಸಂಖ್ಯೆ:ಇಡಿ 30 ಯುಪಿಸಿ 2008, ದಿನಾಂಕ: 05–10–2009
4. ಕಾಲೇಜು ಶಿಕ್ಷಣ ಆಯುಕ್ತರ ಪತ್ರ ಸಂಖ್ಯೆ: ಕಾಶಿಇ/406/ಪಜಾ. ಪಪಂ/ಗುವಿ/2011–12/ ನೇಪಾವಿ–2, ದಿನಾಂಕ: 17–02–2014.

**ಪ್ರಸ್ತಾವನೆ :**

ಮೇಲೆ ಕ್ರಮಾಂಕ (1)ರ ಸರ್ಕಾರಿ ಅಧಿಸೂಚನೆಯನ್ವಯ ರಚಿಸಲಾದ ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಕಾಲೇಜು ಶಿಕ್ಷಣ) ನಿಯಮಗಳು 2003ರ ನಿಯಮ 8(1)ರನ್ವಯ ದಿನಾಂಕ: 01–06–1987ರ ನಂತರ ಪ್ರಾರಂಭಿಸಲಾದ ಯಾವುದೇ ಖಾಸಗಿ ಪದವಿ ಕಾಲೇಜುಗಳು ಮತ್ತು ವಿಷಯಗಳನ್ನು ಅನುದಾನದ ವ್ಯಾಪ್ತಿಗೆ ಒಳಪಡಿಸಲು ಅವಕಾಶವಿರುವುದಿಲ್ಲ.

ರಾಜ್ಯದ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಆಡಳಿತ ಮಂಡಳಿಗಳು ದಿನಾಂಕ: 01–06–1987 ರಿಂದ ದಿನಾಂಕ:31–03–1995ರ ಅವಧಿಯಲ್ಲಿ ಪ್ರಾರಂಭಿಸಿ ನಡೆಸಲಾಗುತ್ತಿರುವ ಕಾಲೇಜುಗಳು ಮತ್ತು ಕೋರ್ಸ್‌ಗಳನ್ನು ವೇತನಾನುದಾನಕ್ಕೆ ಒಳಪಡಿಸಲು ಸರ್ಕಾರ ತೀರ್ಮಾನಿಸಿ ಈ ಕುರಿತು ನಿಯಮಗಳನ್ನು ರಚಿಸಲು ದಿನಾಂಕ: 18–02–2009ರಂದು ಜರುಗಿದ ಸಚಿವ ಸಂಪುಟ ಸಭೆಯು ಅನುಮೋದನೆ ನೀಡಿದೆ.

ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಆಡಳಿತ ಮಂಡಳಿಯಿಂದ ನಡೆಸಲ್ಪಡುತ್ತಿರುವ ಖಾಸಗಿ ಪದವಿ ಕಾಲೇಜುಗಳಿಗೆ ಸಂಬಂಧಿಸಿದಂತೆ ಮಾತ್ರ ಮೇಲೆ ಹೇಳಿದ ನಿಯಮ 8ಕ್ಕೆ ಸೂಕ್ತ ಸೇರ್ಪಡೆ ಮಾಡಿ ದಿನಾಂಕ: 01–06–1987 ರಿಂದ 31–03–1995ರ ಅವಧಿಯಲ್ಲಿ ಪ್ರಾರಂಭಿಸಲ್ಪಟ್ಟ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರು ನಡೆಸುತ್ತಿರುವ ಪ್ರಥಮ ದರ್ಜೆ ಕಾಲೇಜುಗಳನ್ನು ವೇತನಾನುದಾನಕ್ಕೊಳಪಡಿಸಲು ಓದಲಾದ (2)ರ ದಿನಾಂಕ:13–05–2009ರ ಅಧಿಸೂಚನೆಯಲ್ಲಿ ಸೂಕ್ತ ತಿದ್ದುಪಡಿ ಮಾಡಿ ಅವಕಾಶ ಕಲ್ಪಿಸಲಾಗಿದೆ. ಅದರಂತೆ ಓದಲಾದ (3)ರ ದಿನಾಂಕ: 05–10–2009ರಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಆಡಳಿತ ಮಂಡಳಿಗಳಿಗೆ ಸೇರಿದ ಶಿಕ್ಷಣ ಸಂಸ್ಥೆಗಳ ವತಿಯಿಂದ ದಿನಾಂಕ: 1–06–1987 ರಿಂದ 31–03–1995ರ ಅವಧಿಯಲ್ಲಿ ಪ್ರಾರಂಭಿಸಿ ಕೆಲವು ಮಾನದಂಡಗಳನ್ನು ನಿಗಧಿಪಡಿಸಿ ಆದೇಶ ಹೊರಡಿಸಿದೆ. ಮೇಲೆ ಓದಲಾದ (4)ರ ದಿನಾಂಕ: 26–11–2011 ಮತ್ತು ದಿನಾಂಕ: 07–03–2014ರ ಪ್ರಸ್ತಾವನೆಯಲ್ಲಿ ಕಾಲೇಜು ಶಿಕ್ಷಣ ಆಯುಕ್ತರು ಸದರಿ ಕಾಲೇಜಿನ ಯಾವ ಯಾವ ಬೋಧಕ/ಬೋಧಕೇತರ ಸಿಬ್ಬಂದಿ ವರ್ಗದವರನ್ನು ವೇತನಾನುದಾನಕ್ಕೆ ಒಳಪಡಿಸಬೇಕು ಎಂಬುದನ್ನು ಪರಿಶೀಲಿಸಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಆರ್ಥಿಕ ಇಲಾಖೆಗೆ ವೇತನಾನುದಾನಕ್ಕೆ ಒಳಪಡಿಸಲು ಅನುಮೋದನೆಗಾಗಿ ಸಲ್ಲಿಸಿದಾಗ ಆರ್ಥಿಕ ಇಲಾಖೆಯು 03 ಉಪನ್ಯಾಸಕರ ಹಾಗೂ 01 ಗ್ರಂಥಪಾಲಕರ ಹುದ್ದೆಯನ್ನು ಮತ್ತು 13 ಬೋಧಕೇತರ ಹುದ್ದೆಗಳನ್ನು ಸರ್ಕಾರಿ ಆದೇಶ ಸಂಖ್ಯೆ:ಇಡಿ 146 ಯುಪಿಸಿ 79, ದಿನಾಂಕ: 03–10–1981ರ ಆದೇಶದನುಸಾರ ವೇತನಾನುದಾನಕ್ಕೆ ಒಳಪಡಿಸಲು ಸಮ್ಮತಿಸಿದೆ. ಅದರಂತೆ ಕಾಲೇಜು ಶಿಕ್ಷಣ ನಿರ್ದೇಶನಾಲಯದ ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಲಾದ ಅಭ್ಯರ್ಥಿಗಳ ವಿದ್ಯಾರ್ಹತೆ, ವಿಷಯಗಳ ಕಾರ್ಯಭಾರ ಮತ್ತು ಮೀಸಲಾತಿ ಪರಿಶೀಲಿಸಿ, ಸದರಿ ಕಾಲೇಜನ್ನು ಮತ್ತು ಸದರಿ ಕಾಲೇಜಿನಲ್ಲಿ ವಿಷಯವಾರು ಹುದ್ದೆಗಳ ಎದುರು ಕಾರ್ಯ ನಿರ್ವಹಿಸುತ್ತಿರುವ ಅರ್ಹ ಬೋಧಕ ಮತ್ತು ಬೋಧಕೇತರರನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 29 ಯುಪಿಸಿ 2013, ದಿನಾಂಕ: 30–07–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಆಡಳಿತ ಮಂಡಳಿಗಳಿಗೆ ಸೇರಿದ ಶಿಕ್ಷಣ ಸಂಸ್ಥೆಗಳ ವತಿಯಿಂದ ದಿನಾಂಕ: 01–06–1987 ರಿಂದ 31–03–1995ರ ಅವಧಿಯಲ್ಲಿ ಪ್ರಾರಂಭಿಸಿ ನಡೆಸಲ್ಪಡುತ್ತಿರುವ ಡಾ:ಅಂಬೇಡ್ಕರ್ ಪ್ರಥಮ ದರ್ಜೆ ಕಲಾ ಕಾಲೇಜು, ರಂಗಂಪೇಟ, ಸುರಪುರ ಕಾಲೇಜನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ಆರ್ಥಿಕ ಸೌಲಭ್ಯದೊಂದಿಗೆ ಜಾರಿಗೆ ಬರುವಂತೆ ವೇತನಾನುದಾನದ ವ್ಯಾಪ್ತಿಗೆ ತರಲಾಗಿದೆ.

ಸದರಿ ಕಾಲೇಜನ್ನು ವಿಷಯವಾರು ಹುದ್ದೆಗಳ ಎದುರು ಕಾರ್ಯನಿರ್ವಹಿಸುತ್ತಿರುವ ಕೆಳಕಂಡ ಅರ್ಹ ಸಹಾಯಕ ಪ್ರಾಧ್ಯಾಪಕರು/ ಬೋಧಕೇತರರು ಹಾಗೂ ಅವರುಗಳು ಬೋಧಿಸುತ್ತಿರುವ ವಿಷಯ/ಹುದ್ದೆಗಳನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರದ ವೇತನಾನುದಾನದ ವ್ಯಾಪ್ತಿಗೆ ತರಲಾಗಿದೆ.

**ಬೋಧಕರು**

| ಕ್ರ ಸಂ | ವೇತನಾನುದಾನಕ್ಕೆ ಒಳಪಡಿಸಿದ ಬೋಧಕರ ಹೆಸರು | ವೇತನಾನುದಾನಕ್ಕೆ ಒಳಪಡಿಸಿದ ಹುದ್ದೆ ವಿಷಯ | ಪರಿಗಣಿಸಲಾದ ಮೀಸಲಾತಿ | ವೇತನಾನುದಾನಕ್ಕೆ ಒಳಪಡಿಸಿದ ಹುದ್ದೆಗಳ ಸಂಖ್ಯೆ | ಕಾರ್ಯ ಭಾರ | ವೇತನ ಶ್ರೇಣಿ |
|---|---|---|---|---|---|---|
| 1 | ಡಾ: ಉಮಾದೇವಿ. ಆರ್.ದಂಡೋತಿ | ಕನ್ನಡ ಉಪನ್ಯಾಸಕರು | ಪ.ಜಾ. | 01 | 16 ಗಂಟೆ | ಯುಜಿಸಿ |
| 2 | ಡಾ: ಈಶ್ವರಪ್ಪ ನಾಗಪ್ಪ | ರಾಜ್ಯ ಶಾಸ್ತ್ರ ಉಪನ್ಯಾಸಕರು | ಪ್ರವರ್ಗ–1 | 01 | 22 ಗಂಟೆ | ಯುಜಿಸಿ |
| 3 | ಡಾ: ನಾಗಣ್ಣ ರೇವಣಸಿದ್ದಪ್ಪ | ಸಮಾಜಶಾಸ್ತ್ರ ಉಪನ್ಯಾಸಕರು | ಅನ್ವಯಿಸುವುದಿಲ್ಲ | 01 | 22 ಗಂಟೆ | ಯುಜಿಸಿ |
| 4 | ಬಸವರಾಜ ಮಾಲಿಪಾಟೀಲ್ | ಗ್ರಂಥಪಾಲಕರು | ಅನ್ವಯಿಸುವುದಿಲ್ಲ | 01 | – | ಯುಜಿಸಿ |

**ಬೋಧಕೇತರು**

| ಕ್ರ. ಸಂ | ವೇತನಾನುದಾನಕ್ಕೆ ಒಳಪಡಿಸಿದ ಬೋಧಕೇತರರ ಹೆಸರು | ವೇತನಾನುದಾನಕ್ಕೆ ಒಳಪಡಿಸಿದ ಹುದ್ದೆ |
|---|---|---|
| 1 | ಮಲ್ಲಿಕಾರ್ಜುನ ಟೊಣ್ಣಪ್ಪ | ಅಧೀಕ್ಷಕರು |
| 2 | ತಿರುಪತಿ ಆರ್. ನೀರಡಗಿ | ಪ್ರಥಮ ದರ್ಜೆ ಸಹಾಯಕರು |
| 3 | ಹೊನ್ನಪ್ಪ ಮಲ್ಲಪ್ಪ | ದ್ವಿತೀಯ ದರ್ಜೆ ಸಹಾಯಕರು |
| 4 | ರಾಮಕೃಷ್ಣ ದುರ್ಗಪ್ಪ | ದ್ವಿತೀಯ ದರ್ಜೆ ಸಹಾಯಕರು |
| 5 | ಸುಮಿತಕುಮಾರ | ಗ್ರಂಥಾಲಯ ಸಹಾಯಕರು |
| 6 | ಧರ್ಮೇಂದ್ರ | ಅಟೆಂಡರ್ |
| 7 | ಆನಂದ ಬಸಪ್ಪ | ಅಟೆಂಡರ್ |
| 8 | ಶಂಭುಲಿಂಗ | ಪರಿಚಾರಕರು |
| 9 | ಇಬ್ರಾಹಿಮ್. ಎಂ.ಡಿ. | ಪರಿಚಾರಕರು |

| ಕ್ರ. ಸಂ | ವೇತನಾನುದಾನಕ್ಕೆ ಒಳಪಡಿಸಿದ ಬೋಧಕೇತರರ ಹೆಸರು | ವೇತನಾನುದಾನಕ್ಕೆ ಒಳಪಡಿಸಿದ ಹುದ್ದೆ |
|---|---|---|
| 10 | ರಾಘವೇಂದ್ರ | ಪರಿಚಾರಕರು |
| 11 | ಹಣಮಂತ | ಪರಿಚಾರಕರು |
| 12 | ಪ್ರವೀಣ | ಪರಿಚಾರಕರು |
| 13 | ಮಹ್ಮದ್ ಗೌಸ್ | ಪರಿಚಾರಕರು |

1. ಬೋಧಕ ಮತ್ತು ಬೋಧಕೇತರ ಹುದ್ದೆಗಳ ಅನುದಾನ ಸಂಹಿತೆ ಹಾಗೂ ನಿಗದಿತ ಸಿಬ್ಬಂದಿ ಮಾದರಿ ಪ್ರಕಾರ ಇರುವುದನ್ನು ಖಚಿತಪಡಿಸಿಕೊಳ್ಳಬೇಕು. ಬೋಧಕ ಹುದ್ದೆಗಳ ವಿದ್ಯಾರ್ಹತೆ, ಯುಜಿಸಿ ನಿಗದಿಪಡಿಸಿದ ನಿಯಮಗಳು ಹಾಗೂ ಜಾರಿಯಲ್ಲಿರುವ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳ ಪ್ರಕಾರ (ಸಿ&ಆರ್ ರೂಲ್ಸ್) ಇರುವುದನ್ನು ಸಹ ಖಚಿತಪಡಿಸಿಕೊಳ್ಳಬೇಕು.
2. ಈ ಅನುಮೋದನೆಯು ಸರ್ಕಾರಿ ಆದೇಶ ಸಂಖ್ಯೆ: ಇಡಿ 146 ಯುಪಿಸಿ 1979, ದಿನಾಂಕ: 03–10–1981ರಲ್ಲಿರುವಂತೆ ವಿದ್ಯಾರ್ಥಿಗಳ ಸಂಖ್ಯೆಗನುಗುಣವಾಗಿ ಅಂಗೀಕೃತ ಸಿಬ್ಬಂದಿ ನಮೂನೆಯಲ್ಲಿರತಕ್ಕದ್ದು ಹಾಗೂ ಈ ಬಗ್ಗೆ ಜಂಟಿ ನಿರ್ದೇಶಕರು ಜವಾಬ್ದಾರರಾಗುತ್ತಾರೆ.
3. ಹುದ್ದೆಗಳನ್ನು ಭರ್ತಿ ಮಾಡುವ ಮುನ್ನ ಸಂಬಂಧಿಸಿದ ಕಾಲೇಜು ಶಿಕ್ಷಣ ಇಲಾಖೆಯಿಂದ ಪೂರ್ವಾನುಮತಿ ಪಡೆದಿರಬೇಕು. ಈ ರೀತಿ ಭರ್ತಿ ಮಾಡಿಕೊಂಡಿರುವ ಹುದ್ದೆಗಳನ್ನು ಸಂಬಂಧಿಸಿದ ಪ್ರಾಧಿಕಾರ ಅನುದಾನರಹಿತವಾಗಿ ಪ್ರಥಮದಲ್ಲಿ ಅನುಮೋದಿಸಬೇಕು. ಕಾಲೇಜು ಶಿಕ್ಷಣ ಆಯುಕ್ತರು ದಾಖಲೆಗಳನ್ನು ಪರಿಶೀಲಿಸಿ ಹುದ್ದೆ ಯಾವ ವರ್ಗಕ್ಕೆ ಮೀಸಲಾಗಿತ್ತು, ನೇಮಕ ಮಾಡಿರುವ ಅಭ್ಯರ್ಥಿ ಅದೇ ವರ್ಗಕ್ಕೆ ಸೇರಿದವರೇ ಎಂಬುದನ್ನು ದೃಢೀಕರಿಸಬೇಕು.
4. ಒಂದು ವೇಳೆ ಅನುದಾನರಹಿತವಾಗಿ ಪೂರ್ವಾನುಮತಿ ಪಡೆಯದಿದ್ದರೆ ಈಗ ಸದರಿ ಹುದ್ದೆಗಳ ನೇಮಕಾತಿ ಬಗ್ಗೆ ಅಂದರೆ ಅನುದಾನ ಸಂಹಿತೆ ಹಾಗೂ C&R Rules ಪ್ರಕಾರ ವಿದ್ಯಾರ್ಹತೆ, ವಯೋಮಿತಿ ಹಾಗೂ ನೇಮಕಾತಿ ನಿಯಮಗಳನ್ನು ಪಾಲಿಸಿದ ಬಗ್ಗೆ ಅಂದರೆ ಪತ್ರಿಕಾ ಜಾಹೀರಾತು ಪ್ರಕಟಿಸಿ ಅರ್ಹತೆ ಆಧಾರದ ಮೇಲೆ ಪಾರದರ್ಶಕವಾಗಿ ಆಯ್ಕೆ ಮಾಡಿ ಹುದ್ದೆಗೆ ನೇಮಕಾತಿ ಮಾಡಿರುವ ಬಗ್ಗೆ ದೃಢೀಕರಿಸಿ ಅನುದಾನರಹಿತವಾಗಿ ಅನುಮೋದಿಸಬೇಕು. ನಂತರವೇ ಕಾಲೇಜಿನಿಂದ ನೇಮಕ ಮಾಡಿರುವ ಅಭ್ಯರ್ಥಿಯ ನೇಮಕಾತಿಗೆ ವೇತನಾನುದಾನ ಸಹಿತ ಅನುಮೋದನೆ ನೀಡಬೇಕು.
5. ಸರ್ಕಾರದ ಆದೇಶ ಸಂಖ್ಯೆ: ಸಿ.ಆಸುಇ 08 ಸೆಹಿಮ 1995, ದಿನಾಂಕ: 20–06–1995 ರನ್ವಯ ಮೀಸಲಾತಿ ಪಾಲಿಸಿರುವ ಬಗ್ಗೆ ಖಚಿತಪಡಿಸಿಕೊಂಡ ನಂತರ ಅನುದಾನ ಬಿಡುಗಡೆಗೊಳಿಸತಕ್ಕದ್ದು. ಪ್ರಸ್ತಾಪಿತ ಪ್ರಕರಣಗಳಲ್ಲಿ ಮೀಸಲಾತಿ ಪಾಲಿಸಿರುವ ಬಗ್ಗೆ ಸಂಬಂಧಿಸಿದ ಅಧಿಕಾರಿ ದೃಢೀಕರಿಸಬೇಕು. ಇದರ ಜೊತೆಗೆ ದಿನಾಂಕ: 01–06–1992ರ ನಂತರದ ಎಲ್ಲಾ ನೇಮಕಾತಿಗಳಲ್ಲಿ ಮೀಸಲಾತಿ ಪಾಲನೆಯಾಗಿರುವ ಬಗ್ಗೆಯೂ ಸಹ ಪರಿಶೀಲಿಸಿ ದೃಢಪಡಿಸಿಕೊಳ್ಳುವುದು. ನಂತರವೇ ವೇತನಾನುದಾನಕ್ಕೆ ಒಳಪಡಿಸಲು ಕ್ರಮ ವಹಿಸತಕ್ಕದ್ದು.
6. ಈ ಕಾಲೇಜಿಗೆ ಸಂಬಂಧಿಸಿದಂತೆ ನೇಮಕವಾಗಿರುವ ಬೋಧಕ/ಬೋಧಕೇತರ ಹುದ್ದೆಗಳಿಗೆ ಸಂಬಂಧಿಸಿದಂತೆ ನ್ಯಾಯಾಲಯದಲ್ಲಿ ಯಾವುದೇ ವಿವಾದ ಇರುವುದಿಲ್ಲ ಎಂಬುದನ್ನು ದೃಢಪಡಿಸಿಕೊಳ್ಳಬೇಕು.
7. ಮೇಲಿನಂತೆ ಅಗತ್ಯ ದಾಖಲೆಗಳನ್ನು ಪರಿಶೀಲಿಸಿ ದೃಢೀಕರಿಸಿ ಕ್ರಮವಹಿಸಿದ ನಂತರ ಪ್ರತಿ ಹುದ್ದೆಗಳನ್ನು ವೇತನಾನುದಾನಕ್ಕೆ ಒಳಪಡಿಸಿ ಸರ್ಕಾರಿ ಆದೇಶ ಹೊರಡಿಸಿದ ದಿನಾಂಕದಿಂದ ವೇತನಾನುದಾನ ಜಾರಿಗೊಳಿಸುವುದು. ಯಾವುದೇ ಕಾರಣಕ್ಕೂ ಹಿಂದಿನ ಸೇವಾವಧಿಯನ್ನು ರಜೆ, ಪಿಂಚಣಿ ಮತ್ತು ವೇತನಾನುದಾನಕ್ಕೆ ಪರಿಗಣಿಸಬಾರದು.
8. ಸದರಿ ಕಾಲೇಜಿನ ಬೋಧಕ/ಬೋಧಕೇತರ ಸಿಬ್ಬಂದಿಯನ್ನು ವೇತನಾನುದಾನಕ್ಕೆ ಒಳಪಡಿಸಿ ತಗಲುವ ವೆಚ್ಚವನ್ನು ಇಲಾಖೆಗೆ ಒದಗಿಸಿ ಯೋಜನಾ ಅನುದಾನದ ಮಿತಿಯಲ್ಲಿಯೇ ಭರಿಸಬೇಕು.
9. ಸಿಬ್ಬಂದಿಯ ಸೇವಾ ಭದ್ರತೆಯನ್ನು ಒದಗಿಸುವ ಬಗ್ಗೆ ಹೆಚ್.ಆರ್.ಎಂ.ಎಸ್ ನಲ್ಲಿ ಅಳವಡಿಸಿರುವುದನ್ನು ಖಚಿತಪಡಿಸಿಕೊಳ್ಳಬೇಕು.
10. ಆರ್ಥಿಕ/ಶಿಕ್ಷಣ ಇಲಾಖೆ ನಿಗದಿಪಡಿಸಿರುವ ಎಲ್ಲಾ ಷರತ್ತುಗಳು/ನಿಯಮಗಳು/ಅನುದಾನ ಸಂಹಿತೆಯಲ್ಲಿ ನಿಗದಿಪಡಿಸಿರುವ ಷರತ್ತುಗಳನ್ನು ಪಾಲಿಸಿರುವುದನ್ನು ಖಚಿತಪಡಿಸಿಕೊಳ್ಳಬೇಕು.
11. The Karnataka Educational institutions (Recruitment terms and conditions etc.,) Rules 1999 ಅನುಬಂಧ–II ರಲ್ಲಿ benefits not available for service rendered during the un-aided period for purpose of fixation of pay, leave and pension or any other service benefits by the Government. ಈ ನಿಯಮಗಳನ್ವಯ ಉಪನ್ಯಾಸಕರು ಅನುದಾನರಹಿತ ಅವಧಿಯಲ್ಲಿ ಸಲ್ಲಿಸಿದ ಸೇವೆಯನ್ನು ಯಾವುದೇ ಸೇವಾ ಸೌಲಭ್ಯಗಳಿಗೆ ಪರಿಗಣಿಸಲಾಗುವುದಿಲ್ಲ ಎಂಬ ಷರತ್ತಿಗೆ ಬದ್ಧನಾಗಿರುತ್ತೇನೆಂದು ಉಪನ್ಯಾಸಕರುಗಳಿಂದ ರೂ.50/– ರ ಮುಚ್ಚಳಿಕೆ ಪತ್ರವನ್ನು ಸಂಬಂಧಿಸಿದ ಸಕ್ಷಮ ಪ್ರಾಧಿಕಾರವು ಬರೆಸಿಕೊಂಡು ನಂತರವೇ ಸಹಾಯಾನುದಾನಕ್ಕೆ ಒಳಪಡಿಸುವ ಬಗ್ಗೆ ಕ್ರಮ ವಹಿಸಲು ಆದೇಶಿಸಿದೆ.
12. ಆಡಳಿತ ಮಂಡಳಿಯಲ್ಲಿ ವ್ಯಾಜ್ಯ ಇರತಕ್ಕದ್ದಲ್ಲ. ಒಂದು ವೇಳೆ ಅಂತಹ ವ್ಯಾಜ್ಯ. ಇದ್ದಲ್ಲಿ ಅಂತಹ ಸಂಸ್ಥೆಯನ್ನು ಅನುದಾನಕ್ಕೆ ಒಳಪಡಿಸಲು ಅರ್ಹತೆ ಪಡೆಯುವುದಿಲ್ಲ.
13. ಕರ್ನಾಟಕ ಸಂಘಗಳ ನೋಂದಣಿ ನಿಯಮಾವಳಿಯಲ್ಲಿ ನಮೂದಿಸಿರುವ ಅವಕಾಶಗಳ ಪ್ರಕಾರ ಪ್ರತಿ ವರ್ಷ ಆಡಿಟ್ ನಡೆಸಿ ವರದಿಯನ್ನು ಸಕ್ಷಮ್ ಪ್ರಾಧಿಕಾರಕ್ಕೆ ಸಲ್ಲಿಸಬೇಕು ಹಾಗೂ ಸಂಬಂಧಿಸಿದ ಆಯುಕ್ತರಿಗೆ ಮಾಹಿತಿಗಾಗಿ ಪಿ.ಟಿಟಿ.ಆರ್ ಮತ್ತು ಸಂಘದ ಕಾರ್ಯಕಾರಿ ಸದಸ್ಯರ ಅಧಿಕೃತ ಪಟ್ಟಿಯನ್ನು ಸಲ್ಲಿಸತಕ್ಕದ್ದು. (ಸಕ್ಷಮ ಪ್ರಾಧಿಕಾರದಿಂದ ದೃಢೀಕರಿಸಲ್ಪಟ್ಟಿರಬೇಕು)
14. ಒಂದು ವೇಳೆ ಈ ಆದೇಶದಲ್ಲಿ ವೇತನಾನುದಾನಕ್ಕೆ ಒಳಪಟ್ಟ ಬೋಧಕ/ಬೋಧಕೇತರರುಗಳ ಪೈಕಿ ಯಾವುದೇ ಅನರ್ಹತೆ ಕಂಡು ಬಂದಲ್ಲಿ ಯಾವುದೇ ಮುನ್ಸೂಚನೆಯಿಲ್ಲದೆ ವೇತನಾನುದಾನದ ವ್ಯಾಪ್ತಿಗೆ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.

15. ವೇತನಾನುದಾನದ ವ್ಯಾಪ್ತಿಗೆ ಒಳಪಟ್ಟಂತಹ ಮೇಲ್ಕಂಡ ಉಪನ್ಯಾಸಕರುಗಳ/ಬೋಧಕೇತರರ ವೇತನವನ್ನು ಆದೇಶ ಹೊರಡಿಸಿದ ದಿನಾಂಕದಿಂದ ವಿಸ್ತರಿಸಿರುವ ವೇತನ ಶ್ರೇಣಿಯ ಕನಿಷ್ಠ ಮೂಲ ವೇತನದಲ್ಲಿ ನಿಗದಿ ಪಡಿಸತಕ್ಕದ್ದು. ಹಾಗೂ ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಲಾದ ಪೂರ್ವದಲ್ಲಿ ಸಲ್ಲಿಸಿರುವ ಸೇವೆಯನ್ನು ಯಾವುದೆ ಸೇವಾ ಹಾಗೂ ಪಿಂಚಣಿ ಸೌಲಭ್ಯಗಳಿಗೆ ಪರಿಗಣಿಸುವಂತಿಲ್ಲ.

16. ವೇತನಾನುದಾನ ವ್ಯಾಪ್ತಿಗೆ ತರಲಾದ ಉಪನ್ಯಾಸಕರುಗಳ ಕಾರ್ಯಭಾರದಲ್ಲಿ ಕೊರತೆ ಉದ್ಭವಿಸಿದ ಪಕ್ಷದಲ್ಲಿ ಅಂತಹ ಉಪನ್ಯಾಸಕರುಗಳನ್ನು ಕಾರ್ಯಭಾರ ಇರುವಂತಹ ಅನುದಾನಿತ ಕಾಲೇಜು/ಸರ್ಕಾರಿ ಕಾಲೇಜುಗಳ ಕಾರ್ಯಭಾರದ ಎದುರಾಗಿ ನಿಯೋಜನೆ ಮೇಲೆ ಮರು ಹಂಚಿಕೆ ಮಾಡುವ ಷರತ್ತಿಗೊಳಪಟ್ಟಿದೆ.

17. ಸಂಸ್ಥೆಯ ಬೈಲಾದಲ್ಲಿ ನಿಗಧಿಪಡಿಸಿರುವಂತೆ ಆಡಳಿತ ಮಂಡಳಿಯ ಎಲ್ಲಾ ಪದಾಧಿಕಾರಿಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರೇ ಆಗಿರಬೇಕು. ಒಂದು ವೇಳೆ ಅನ್ಯ ವರ್ಗದ ವ್ಯಕ್ತಿಯನ್ನು ಆಡಳಿತ ಮಂಡಳಿಯ ಪದಾಧಿಕಾರಿಗಳಾಗಿ ಆಯ್ಕೆ ಮಾಡಿದ್ದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.

18. ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಕಾಲೇಜು ಶಿಕ್ಷಣ) ನಿಯಮಗಳು, 2003ರ ನಿಯಮ 15(ಇ)ರಡಿಯಲ್ಲಿ ನಿಗಧಿಪಡಿಸಿರುವ ಅಪೆಂಡಿಕ್ಸ್ (2)ರಲ್ಲಿ ಸೂಚಿಸಿರುವಂತೆ ಬೋಧನಾ ಕೊಠಡಿಗಳು, ಪ್ರಯೋಗಾಲಯಗಳು, ಶೌಚಾಲಯ ಇತ್ಯಾದಿಗಳನ್ನು ಒಳಗೊಂಡ ಮೂಲಭೂತ ಸೌಕರ್ಯಗಳನ್ನು ಸಂಸ್ಥೆಯು ಜರೂರು ಒದಗಿಸತಕ್ಕದ್ದು.

19. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರು ನಡೆಸುತ್ತಿರುವ ಕಾಲೇಜುಗಳನ್ನು ವೇತನಾನುದಾನಕ್ಕೆ ಒಳಪಡಿಸುವ ಸಂದರ್ಭದಲ್ಲಿ ಅಂತಹ ಕಾಲೇಜುಗಳಲ್ಲಿ ಒಟ್ಟು ವಿದ್ಯಾರ್ಥಿಗಳ ಸಂಖ್ಯೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳು ಕನಿಷ್ಠ ಪ್ರಮಾಣವನ್ನು ವಿವರವಾಗಿ ಅನುಸರಿಸತಕ್ಕದ್ದು, ತಪ್ಪಿದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.

20. ವಿಶ್ವವಿದ್ಯಾಲಯದವರು ನಿಗಧಿಪಡಿಸಿರುವ ಸರಾಸರಿ ಪ್ರವೇಶಾತಿಗೆ ಸಮಾನಾಂತರವಾಗಿ ಈ ಕಾಲೇಜುಗಳು ಕನಿಷ್ಠ ಪ್ರವೇಶಾತಿಯನ್ನು ಮಾಡಿಕೊಳ್ಳತಕ್ಕದ್ದು ಮತ್ತು ಪ್ರವೇಶಾತಿ (enrollment) ಪಡೆದ ಕಾಲೇಜಿನ ವಿದ್ಯಾರ್ಥಿಗಳ ಪೈಕಿ ಕನಿಷ್ಠ ಶೇಕಡ 75 ರಷ್ಟು ವಿದ್ಯಾರ್ಥಿಗಳು ಪರೀಕ್ಷೆಗೆ ಕುಳಿತುಕೊಳ್ಳುವಂತೆ ಕ್ರಮವಹಿಸತಕ್ಕದ್ದು, ತಪ್ಪಿದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.

21. ಇಂತಹ ಕಾಲೇಜುಗಳಲ್ಲಿನ ಪರೀಕ್ಷಾ ಫಲಿತಾಂಶಗಳು ಸಂಬಂಧಪಟ್ಟ ವಿಶ್ವವಿದ್ಯಾಲಯದ ಮಾನ್ಯತೆ ಪಡೆದ ಇತರೆ ಕಾಲೇಜುಗಳಲ್ಲಿನ ಸರಾಸರಿ ಫಲಿತಾಂಶಕ್ಕಿಂತ ಕಡಿಮೆ ಇರತಕ್ಕದಲ್ಲ ತಪ್ಪಿದಲ್ಲಿ ವೇತನಾನುದಾನ ಹಿಂಪಡೆಯವ ಷರತ್ತಿಗೊಳಪಟ್ಟಿದೆ.

22. ಈ ರೀತಿ ಸಕ್ಷಮ ಪ್ರಾಧಿಕಾರದಿಂದ ಅನುಮತಿ ಪಡೆದು ಪ್ರಾರಂಭವಾದ ಪದವಿ ಕಾಲೇಜುಗಳನ್ನು ಮಧ್ಯದಲ್ಲಿ ಯಾವುದೇ ವಿಚ್ಛಿನ್ನತೆ ಇಲ್ಲದೆ ಸತತವಾಗಿ ನಡೆಸಿರಬೇಕು. ವಿಚ್ಛಿನ್ನತೆ ಉಂಟಾದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.

23. ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಕಾಲೇಜು ಶಿಕ್ಷಣ) ನಿಯಮಗಳು 2003ರ ಮತ್ತು ಇತರ ಸಂಬಂಧಿತ ನಿಯಮಗಳಡಿಯಲ್ಲಿ ನಿಗಧಿಪಡಿಸಿರುವಂತೆ ಮಾದರಿ ಸಿಬ್ಬಂದಿಯನ್ವಯ ನೇಮಕಾತಿ ಮಾಡಿಕೊಳ್ಳತಕ್ಕದ್ದು. ಪ್ರತಿಯೊಂದು ತರಗತಿಯಲ್ಲಿ ನಿಗಧಿತ ಕನಿಷ್ಠ ಮಟ್ಟದ ವಿದ್ಯಾರ್ಥಿ ಹಾಜರಾತಿ ಸಂಖ್ಯಾಬಲವನ್ನು ಹೊಂದಿರತಕ್ಕದ್ದು. ಪದವಿ ಕಾಲೇಜುಗಳಿಗೆ ಸಂಬಂಧಪಟ್ಟಂತೆ ಪ್ರತಿಯೊಂದು ತರಗತಿಯಲ್ಲಿ ಕನಿಷ್ಠ 40 ವಿದ್ಯಾರ್ಥಿಗಳ ಹಾಜರಾತಿ ಕಡ್ಡಾಯವಾಗಿರಬೇಕು. ಭಾಷಾ ವಿಷಯದಲ್ಲಿ ಕನಿಷ್ಠ 10 ವಿದ್ಯಾರ್ಥಿಗಳು ಹಾಗೂ ಐಚ್ಛಿಕ ವಿಷಯಗಳಿಗೆ ಕನಿಷ್ಠ 15 ವಿದ್ಯಾರ್ಥಿಗಳ ಸಂಖ್ಯೆ ಇರಬೇಕು.

24. ನಿಗಧಿತ ಮೂಲಭೂತ ಸೌಲಭ್ಯಗಳಲ್ಲದೆ ಸ್ವಂತ ಕಟ್ಟಡ ಮತ್ತು ಆಟದ ಮೈದಾನಗಳನ್ನು ಹೊಂದಿರತಕ್ಕದ್ದು. ಇವುಗಳನ್ನು ಹೊಂದದೇ ಇರುವ ಸಂಸ್ಥೆಗಳ ಪ್ರಕರಣಗಳಲ್ಲಿ ಈ ಮೂಲಭೂತ ಸೌಲಭ್ಯಗಳನ್ನು ಜರೂರಾಗಿ ಹೊಂದುವ ಷರತ್ತಿಗೆ ಒಳಪಟ್ಟಿದೆ.

25. ಇನ್ನು ಮುಂದೆ ಭವಿಷ್ಯಾನುಸಾರ ಭರ್ತಿ ಮಾಡಬೇಕಾಗಿರುವ ಹುದ್ದೆಗಳಿಗೆ ಸಕ್ಷಮ ಅಧಿಕಾರಿಯಿಂದ ಪೂರ್ವಾನುಮತಿ ಪಡೆಯದೇ ಮಾಡತಕ್ಕದ್ದಲ್ಲ.

26. ನೇರ ನೇಮಕಾತಿ ಬಡ್ತಿ ಮತ್ತು ವಿದ್ಯಾರ್ಥಿಗಳ ಪ್ರವೇಶದ ವಿಷಯದಲ್ಲಿ ಕಾಲಕಾಲಕ್ಕೆ ಹೊರಡಿಸುವ ಸರ್ಕಾರದ ನಿಯಮಗಳು/ಆದೇಶಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

27. ಸದರಿ ಕಾಲೇಜಿನಲ್ಲಿ ಇನ್ನು ಮುಂದೆ ನೌಕರರ ರಾಜೀನಾಮೆ, ನಿವೃತ್ತಿ ಮತ್ತು ನಿಧನದಿಂದ ತೆರವಾದ ಬೋಧಕ/ಬೋಧಕೇತರ ಹುದ್ದೆಗಳನ್ನು ತುಂಬುವಾಗ ಸರ್ಕಾರದ ಪೂರ್ವಾನುಮತಿ ಪಡೆಯುವುದು ಮತ್ತು ಸರ್ಕಾರದ ಮೀಸಲಾತಿ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

28. ಅನುಮೋದಿತ ಹುದ್ದೆಗಳಿಗೆ ವೇತನಾನುದಾನ ಬಿಡುಗಡೆ ಮಾಡುವ ಮುನ್ನ ಸರ್ಕಾರದ ಮತ್ತು ಯುಜಿಸಿ ನಿಯಮಗಳ ಪ್ರಕಾರ ವಯೋಮಿತಿ; ವಿದ್ಯಾರ್ಹತೆ ಮತ್ತಿತರ ಷರತ್ತುಗಳನ್ನು ಪೂರೈಸಿರುವ ಬಗ್ಗೆ ಖಚಿತಪಡಿಸಿಕೊಳ್ಳತಕ್ಕದ್ದು.

29. ಸದರಿ ಕಾಲೇಜಿನಲ್ಲಿ ವೇತನಾನುದಾನಕ್ಕೆ ಒಳಪಡಿಸಲಾಗಿರುವಂತಹ ಬೋಧಕ/ಬೋಧಕೇತರರ ವೇತನವನ್ನು ಪ್ರಥಮ 5 ವರ್ಷಗಳ ಅವಧಿಗೆ ಇಲಾಖೆಗೆ ನಿಗದಿ ಪಡಿಸಲಾದ ಯೋಜನೆ ಹಂಚಿಕೆಯಲ್ಲಿಯೇ ವೆಚ್ಚ ಭರಿಸತಕ್ಕದ್ದು.

30. ಆಡಳಿತ ಮಂಡಳಿಯವರು ಒಪ್ಪಂದದಲ್ಲಿನ ಹಾಗೂ ಮೇಲೆ ಹೇಳಲಾದ ಎಲ್ಲಾ ಅಥವಾ ಯಾವುದೇ ಒಂದು ಷರತ್ತು ಮತ್ತು ನಿಬಂಧನೆಗಳನ್ನು ಉಲ್ಲಂಘಿಸಿದರೆ ಅಥವಾ ತಪ್ಪು ಲೆಕ್ಕ ಪತ್ರಗಳನ್ನು ಅಥವಾ ತಪ್ಪು ದಾಖಲೆಗಳನ್ನು ಒದಗಿಸಿದರೆ ಅಥವಾ ತಪ್ಪು ಮಾಹಿತಿಗಳನ್ನು ನೀಡಿದರೆ ಅಥವಾ ಯಾವುದೇ ಮೋಸ ಎಸಗಿರುವುದು ಕಂಡು ಬಂದಲ್ಲಿ ಸರ್ಕಾರವು ಆಡಳಿತ ಮಂಡಳಿಗೆ ಅಥವಾ ಸಿಬ್ಬಂದಿಗೆ ಈ ಕರಾರಿನ ಮೇರೆಗೆ ಈಗಾಗಲೇ ನೀಡಲಾದ ಪೂರ್ಣ ಅಥವಾ ಭಾಗಶಃ ಅನುದಾನವನ್ನು ಮುಂದುವರೆಸದಿರುವ ಅಥವಾ ತಡೆಹಿಡಿಯುವ ಹಾಗೂ ಈ ಕರಾರಿನ ಮೇರೆಗೆ ಸರ್ಕಾರಕ್ಕೆ ಬಾಕಿ ಎಂದು ಕಂಡು ಬಂದ ಮೊಬಲಗನ್ನು ಆಡಳಿತ ಮಂಡಳಿಯಿಂದ ವಸೂಲು ಮಾಡುವ ಅಧಿಕಾರವನ್ನು ಹೊಂದಿರುತ್ತದೆ.

31. ಆಡಳಿತ ಮಂಡಳಿಯು ಈ ಆದೇಶದ ಪ್ರಕಾರ (Document Sheet) ದಲ್ಲಿ ನೋಟರಿಯವರ ಮುಂದೆ ಪ್ರಮಾಣೀಕರಿಸಿದ ಕರಾರು ಪತ್ರವನ್ನು ನೀಡತಕ್ಕದ್ದು. ಈ ಕರಾರು ಪತ್ರವನ್ನು ನೀಡಿದ ನಂತರವೇ ಅನುದಾನ ಪಾವತಿ ಮಾಡಲು ಕ್ರಮ ತೆಗೆದುಕೊಳ್ಳುವುದು.

ಪ್ರತಿ ವರ್ಷವೂ ಮೇಲ್ಕಂಡ ಷರತ್ತುಗಳನ್ನು ಪೂರೈಸಿರುವ ಕುರಿತು ಸಂಬಂಧಪಟ್ಟ ಜಂಟಿ ನಿರ್ದೇಶಕರು ದೃಢೀಕರಿಸಿದ ನಂತರವೇ ಆಯಾ ವರ್ಷದ ವೇತನಾನುದಾನ ಬಿಡುಗಡೆ ಮಾಡುವಂತೆ ಆಯುಕ್ತಾಲಯಕ್ಕೆ ಸೂಚಿಸಲಾಗಿದೆ. ನ್ಯೂನತೆಗಳಾದಲ್ಲಿ ಸಂಬಂಧಪಟ್ಟ ಜಂಟಿ ನಿರ್ದೇಶಕರೇ ಜವಾಬ್ದಾರರಾಗಿರುತ್ತಾರೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 358 ವೆಚ್ಚ-8 2014 ದಿನಾಂಕ:02-07-2014ರ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಶೇಖರ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)

ಶಿಕ್ಷಣ ಇಲಾಖೆ(ಕಾಲೇಜು ಶಿಕ್ಷಣ)

PR.702

SC- 200

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ. ಕೆ.ಎನ್. ರವೀಶ್. ಪಿಎಸ್‌ಐ. ಚಿಕ್ಕಜಾಜೂರು ಪೊಲೀಸ್ ಠಾಣೆ, ಚಿತ್ರದುರ್ಗ ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ :**

1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಆದೇಶ ಸಂಖ್ಯೆ: ಸಿಬ್ಬಂದಿ(5)/ಇವಿ/13/2011(ಓ.ಬಿ.ಸಂಖ್ಯೆ: 2003/2012) ದಿನಾಂಕ:--12.2012.
2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರ ಆದೇಶ ಸಂಖ್ಯೆ:18/ಅಪೀಲು/ಸಿಬ್ಬಂದಿ-2/2012-13 (ಓ.ಬಿ.ಸಂಖ್ಯೆ:187/2013-14) ದಿನಾಂಕ: 17.01.2014
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 10.02.2014
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು. ಇವರ ಪತ್ರ ಸಂಖ್ಯೆ: ಅಪೀಲು(2)96/2013-14 ದಿನಾಂಕ 02.06.2014.

**ಪ್ರಸ್ತಾವನೆ :**

ಶ್ರೀ ಕೆ.ಎನ್.ರವೀಶ್, ಪಿಎಸ್‌ಐ, ಚಿಕ್ಕಜಾಜೂರು ಪೊಲೀಸ್ ಠಾಣೆ, ಚಿತ್ರದುರ್ಗ ಜಿಲ್ಲೆ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಈ ಹಿಂದೆ ಚನ್ನಗಿರಿ ಪೊಲೀಸ್ ಠಾಣೆ, ದಾವಣಗೆರೆ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ಘೋರ ನಿರ್ಲಕ್ಷ್ಯತನ ಹಾಗೂ ಬೇಜವಾಬ್ದಾರಿ ಪ್ರದರ್ಶಿಸಿದ ಕಾರಣಗಳ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:-**

1. ಶ್ರೀ ಕೆ.ಎನ್.ರವೀಶ್, ಪಿ.ಎಸ್.ಐ, ಚನ್ನಗಿರಿ ಪೊಲೀಸ್ ಠಾಣೆ, ದಾವಣಗೆರೆ ಜಿಲ್ಲೆ ಆದ ನೀವು ಕಾನೂನು ಮತ್ತು ಸುವ್ಯವಸ್ಥೆ ವಿಭಾಗದ ಪಿ.ಎಸ್.ಐ ಕರ್ತವ್ಯ ನಿರ್ವಹಿಸುತ್ತಿದ್ದು, ಠಾಣೆಯಲ್ಲಿ ನಡೆಯುವ ದಿನನಿತ್ಯದ ಘಟನೆಗಳ ಬಗ್ಗೆ ಹಾಗೂ ವರದಿಯಾದ ಪ್ರಕರಣಗಳನ್ನು ಕಾಲಕಾಲಕ್ಕೆ ಇಲಾಖಾ ನಿಯಮಾನುಸಾರ ಠಾಣಾ ದಿನಚರಿಯಲ್ಲಿ ಪ್ರತಿದಿನ ಬೆಳಗ್ಗೆ 7.00 ಗಂಟೆಗೆ ದಿನಚರಿಯನ್ನು ಪ್ರಾರಂಭಿಸಿ ಸಿಬ್ಬಂದಿಯವರ ಹಾಜರಾತಿಯನ್ನು ಪಡೆದು, ಕರ್ತವ್ಯಕ್ಕೆ ನೇಮಿಸಿ, ಮರು ದಿನ 7.00 ಗಂಟೆಯಿಂದ ದಿನಚರಿಯನ್ನು ಮುಕ್ತಾಯ ಮಾಡುವವರೆಗೆ ವಿವರಗಳನ್ನು ನಮೂದಿಸುವುದು ನಿಮ್ಮ ಕರ್ತವ್ಯವಾಗಿರುತ್ತದೆ. ಆದರೆ ನೀವು ದಿನಾಂಕ: 20.12.2010 ರಿಂದ ದಿನಾಂಕ: 31.12.2010ರವರೆಗೆ ಒಟ್ಟು 12 ದಿನಗಳ ಠಾಣಾ ದಿನಚರಿಯನ್ನು ಬರೆಯದೇ ಕರ್ತವ್ಯ ಲೋಪವೆಸಗಿರುತ್ತೀರಿ. ನೀವು ಒಬ್ಬ ಜವಬ್ದಾರಿಯುತ ತರಬೇತಿ ಹೊಂದಿದ ಅಧಿಕಾರಿಯಾಗಿ. ನಿಮ್ಮ ಆದ್ಯ ಕರ್ತವ್ಯದಲ್ಲಿ ಇಲಾಖಾ ನಿಯಮಾವಳಿಗಳನ್ನು ಉಲ್ಲಂಘಿಸಿ, ಘೋರ ದುರ್ನಡತೆ ಮತ್ತು ನಿರ್ಲಕ್ಷ್ಯತನವನ್ನು ಪ್ರದರ್ಶಿಸಿರುತ್ತೀರೆಂದು ಆಪಾದಿಸಲಾಗಿದೆ.

2. ನಿಮ್ಮ ಠಾಣಾ ವ್ಯಾಪ್ತಿಯಲ್ಲಿ ನಡೆಯುವ ಓ.ಸಿ. ಇಸ್ಪೀಟ್ ಜೂಜಾಟ ಮತ್ತು ಇತರೇ ಕಾನೂನು ಬಾಹಿರ ಕರ್ತವ್ಯವಾಗಿದ್ದರೂ ನೀವು ಪ್ರಭಾರ ವಹಿಸಿಕೊಂಡಾಗಿನಿಂದ ಚನ್ನಗಿರಿ ಠಾಣಾ ವ್ಯಾಪ್ತಿಯಲ್ಲಿ ಅವ್ಯಾಹತವಾಗಿ ನಡೆಯುತ್ತಿರುವ ಜೂಜಾಟದ ದಂಧೆಯನ್ನು ತಡೆಯುವಲಿ ಯಾವುದೇ ಕ್ರಮ ಕೈಗೊಳ್ಳದೇ ನಿರ್ಲಿಪ್ತರಾಗಿರುತ್ತೀರಿ. ದಿನಾಂಕ:15.01.2011 ರಂದು ಸಹಾಯಕ ಪೊಲೀಸ್ ಅಧೀಕ್ಷಕರು, ಗ್ರಾಮಾಂತರ ಉಪ ವಿಭಾಗ, ದಾವಣಗೆರೆರವರು ಮತ್ತು ಅವರ ಸಿಬ್ಬಂದಿಗಳು ಠಾಣಾ ಸರಹದ್ದಿನ ಮಾದಾಪುರ ಗ್ರಾಮದಲ್ಲಿ ಅಂದರ್-ಬಾಹರ್ ಇಸ್ಪೀಟ್ ಜೂಜಾಟನ ಸ್ಥಳದ ಮೇಲೆ ದಾಳಿ ನಡೆಸಿ, ರೂ.27,700/- ನಗದು ಹಣವನ್ನು ಹಾಗೂ ಜೂಜಾಟವಾಡುತ್ತಿದ್ದ 03 ಜನರನ್ನು 03 ಮೊಬೈಲ್‌ನ್ನು ವಶಪಡಿಸಿಕೊಂಡು, ಅರೋಪಿಗಳನ್ನು ದಸ್ತಗಿರಿ ಮಾಡಿ ಕಾನೂನು ಕ್ರಮ ಕೈಗೊಂಡಿರುತ್ತಾರೆ. ಈ ಬಗ್ಗೆ ಸೂಕ್ತ ಸಿಬ್ಬಂದಿಗಳನ್ನು ನಿಯೋಜಿಸಿ, ಗುಪ್ತ ಮಾಹಿತಿ ತೆಗೆದು, ಇದನ್ನು ಸಂಪೂರ್ಣವಾಗಿ ತಡಗಟ್ಟುವಂತೆ ಕಟ್ಟುನಿಟ್ಟಿನ ನಿರ್ದೇಶನಗಳನ್ನು ನೀಡಿದ್ದಾಗ್ಯೂ ನೀವು ಯಾವುದೇ ಕ್ರಮ ಕೈಗೊಳ್ಳದೇ ನಿರ್ಲಿಪ್ತರಾಗಿರುತ್ತೀರಿ. ಕಾನೂನು ಬಾಹಿರ ಚಟುವಟಿಕೆಗಳ್ನು ತಡೆಗಟ್ಟುವಲ್ಲಿ ಪ್ರಾಮಾಣಿಕ ಪ್ರಯತ್ನ ಮಾಡದೇ ನಿಮ್ಮ ಆದ್ಯ ಕರ್ತವ್ಯದಲ್ಲಿ ಘೋರ ನಿರ್ಲಕ್ಷ್ಯತೆ ಹಾಗೂ ಬೇಜವಾಬ್ದಾರಿತವನ್ನು ಪ್ರದರ್ಶಿಸಿ, ಮೇಲಾಧಿಕಾರಿಗಳ ಆದೇಶವನ್ನು ಉಲ್ಲಂಘಿಸಿ ದುರ್ನಡತೆಯನ್ನು ಪ್ರದರ್ಶಿಸಿರುತ್ತೀರೆಂದು ಆಪಾದಿಸಲಾಗಿದೆ.

ಇಲಾಖಾ ವಿಚಾರಣೆಯಲ್ಲಿ ಆ.ಪೊ.ಅ.ರವರ ಮೇಲಿನ ಆಪಾದನೆಗಳು ಸಾಬೀತಾಗಿದೆಯೆಂದು ವಿಚಾರಣಾಧಿಕಾರಿಗಳು ಅಭಿಪ್ರಾಯ ನೀಡಿದ್ದು, ಅದರಂತೆ ಆ.ಪೊ.ಅ.ರವರಿಗೆ ಕಾರಣ ಕೇಳುವ ನೋಟೀಸ್ ಜಾರಿ ಮಾಡಿ, ಆ.ಪೊ.ಅ.ರವರು ನೀಡಿದ ಸಮಜಾಯಿಷಿಯನ್ನು ಒಪ್ಪದ ಶಿಸ್ತು ಪ್ರಾಧಿಕಾರ

ಹಾಗೂ ಪೊಲೀಸ್ ಅಧಿಕ್ಷಕರು, ದಾವಣಗೆರೆ ಜಿಲ್ಲೆ ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ—12.2012ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಭವಿಷ್ಯದ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀದರಂತೆ 1 (ಒಂದು) ವರ್ಷ ಕಾಲ ಮುಂದೂಡಿ ಮತ್ತು ದಿನಾಂಕ: 14.05.2011ರಿಂದ ದಿನಾಂಕ 17.08.2011ರ ವರೆಗೆ ಒಟ್ಟು 96 ದಿನಗಳ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಲಾದ ದಂಡನೆಯನ್ನು ವಿಧಿಸಿರುತ್ತಾರೆ.

ಶಿಸ್ತು ಪ್ರಾಧಿಕಾರ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 17.01.2014ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣಾ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ. ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ ಹಾಗೂ ಇವರಿಗೆ ವಿಧಿಸಿರುವ ಶಿಕ್ಷೆಯು ಆರೋಪಗಳಿಗೆ ತಕ್ಕುದಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 28 ಪೊಸಿಅ 2014 ಬೆಂಗಳೂರು, ದಿನಾಂಕ: 07.08.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ.ಎನ್. ರವೀಶ್, ಪಿಎಸ್ಐ, ಚಿಕ್ಕಜಾಜೂರು ಪೊಲೀಸ್ ಠಾಣೆ, ಚಿತ್ರದುರ್ಗ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ದೇವೆಂದ್ರಪ್ಪ ಕಟ್ಟಿಮನಿ**

PR.711

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ(ಪೊಲೀಸ್ ಸೇವೆಗಳು–ಬಿ)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಸ್.ಕೆ. ರಮಾನಂದಸ್ವಾಮಿ, ಮಾಜಿ ಸಿಪಿಸಿ–202, ಹುಣಸೂರು ಗ್ರಾಮೀಣ ಪೊಲೀಸ್ ಠಾಣೆ, ಮೈಸೂರು ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಮೈಸೂರು ಜಿಲ್ಲೆ, ಇವರ ಆದೇಶ ಸಂಖ್ಯೆ: ಡಿಇ/15/2007–08 (ಓ.ಬಿ.ಸಂಖ್ಯೆ: 23.08.2008) ದಿನಾಂಕ:23.08.2008.
2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ: ಅಪೀಲು/32/2008–09 (ಓ.ಬಿ.ಸಂಖ್ಯೆ:29/2008–09) ದಿನಾಂಕ: 07.10.2008
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 19.02.2014
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು. ಇವರ ಪತ್ರ ಸಂಖ್ಯೆ: ಅಪೀಲು(2)102/2013–14 ದಿನಾಂಕ 03.07.2014.

**ಪ್ರಸ್ತಾವನೆ:–**

ಶ್ರೀ ಎಸ್.ಕೆ. ರಮಾನಂದಸ್ವಾಮಿ, ಮಾಜಿ ಸಿಪಿಸಿ–202, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಹುಣಸೂರು ಗ್ರಾಮೀಣ ಪೊಲೀಸ್ ಠಾಣೆ, ಮೈಸೂರು ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ಅಶಿಸ್ತು ಮತ್ತು ದುರ್ನಡತೆ ಪ್ರದರ್ಶಿಸಿದ ಕಾರನದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ನೀವು ದಿನಾಂಕ: 15.10.2007 ರಂದು ಬೆಳಿಗ್ಗೆ 11.00 ಗಂಟೆಯಲ್ಲಿ ಕರ್ತವ್ಯದ ಸಮಯದಲ್ಲಿ ವಿಪರೀತ ಮದ್ಯಪಾನ ಮಾಡಿ, ಉಪ ಖಜಾನೆಯ ಗಾರ್ಡ್ ರೂಮ್‌ನಲ್ಲಿ ಅಶ್ಲೀಲವಾಗಿ ಪ್ರಜ್ಞೆ ಇಲ್ಲದೇ ಬಿದ್ದಿದ್ದು, ಈ ದೃಶ್ಯವನ್ನು ಸಾರ್ವಜನಿಕರು ವೀಕ್ಷಿಸಲು ಅವಕಾಶ ಮಾಡಿ ಕೊಡುವುದರ ಮೂಲಕ ಇಲಾಖೆಯ ಘನತೆಗೆ ಕುಂದು ಉಂಟಾಗುವಂತೆ ವರ್ತಿಸಿ, ಅಶಿಸ್ತು ಮತ್ತು ದುರ್ನಡತೆ ಪ್ರದರ್ಶಿಸಿರುವ ಬಗ್ಗೆ.

ನೀವು ಪದೇ ಪದೇ ಅನಧಿಕೃತ ಗೈರು ಹಾಜರಿಯಾಗುವ ಹವ್ಯಾಸವನ್ನು ರೂಡಿಸಿಕೊಂಡು, ಬೇಜವಾಬ್ದಾರಿ ಹಾಗೂ ನಿರ್ಲಕ್ಷ್ಯತೆಯಿಂದ ದಿನಾಂಕ: 15.10.2007 ರಿಂದ 24.10.2007ರವರೆಗೆ ಹಾಗೂ ದಿನಾಂಕ: 26.10.2007 ರಿಂದ ಅನಧಿಕೃತ ಗೈರು ಹಾಜರಾಗಿರುವುದರ ಮೂಲಕ ಅಶಿಸ್ತು ಪ್ರದರ್ಶಿಸಿರುವ ಬಗ್ಗೆ.

ಇಲಾಖಾ ವಿಚಾರಣೆಯಲ್ಲಿ ಆ.ಪೊ.ಅ.ರವರ ಮೇಲಿನ ಆಪಾದನೆಗಳು ಸಾಬೀತಾಗಿದೆಯೆಂದು ವಿಚಾರಣಾಧಿಕಾರಿಗಳು ಅಭಿಪ್ರಾಯ ನೀಡಿದ್ದು, ಅದರಂತೆ ಆ.ಪೊ.ಅ.ರವರಿಗೆ ಕಾರಣ ಕೇಳುವ ನೋಟೀಸ್ ಜಾರಿ ಮಾಡಿ, ಆ.ಪೊ.ಅ.ರವರು ನೀಡಿದ ಸಮಜಾಯಿಷಿಯನ್ನು ಒಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧಿಕ್ಷಕರು, ಮೈಸೂರು ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 23.08.2008ರ ಆದೇಶದಲ್ಲಿ ಅರ್ಜಿದಾರರನ್ನು ಕರ್ನಾಟಕ ಪೊಲೀಸ್ ಕಾಯ್ದೆ 1963ರ ನಿಯಮ 23(ಬಿ)(2)ರನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಕೆಲಸದಿಂದ ಕಡ್ಡಾಯ ನಿವೃತ್ತಿಗೊಳಿಸಲಾಗಿದೆ.

ಶಿಸ್ತು ಪ್ರಾಧಿಕಾರದ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 07.10.2008ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ, ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣಾ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ವಿಚಾರಣಾಧಿಕಾರಿಯವರು ವಿಚಾರಣಾ ವರದಿಯಲ್ಲಿ ಆರೋಪಿತ ನೌಕರರ ಮೇಲಿನ ಆರೋಪಗಳು ಸಾಬೀತಾಗಿರುವುದರಿಂದ, ಶಿಸ್ತು ಪ್ರಾಧಿಕಾರವು ಕಡ್ಡಾಯ ನಿವೃತ್ತಿಗೊಳಿಸಿ ಆದೇಶಿಸಿರುವ ದಂಡನೆಯು ಸೂಕ್ತವಾಗಿರುವ ಹಿನ್ನಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 92 ಪೊಸಿಅ 2014 ಬೆಂಗಳೂರು, ದಿನಾಂಕ: 25.08.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಕೆ. ರಮಾನಂದಸ್ವಾಮಿ, ಮಾಜಿ ಸಿಪಿಸಿ–202, ಹುಣಸೂರು ಗ್ರಾಮೀಣ ಪೊಲೀಸ್ ಠಾಣೆ, ಮೈಸೂರು ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

PR.712

**ದೇವೆಂದ್ರಪ್ಪ ಕಟ್ಟಿಮನಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ(ಪೊಲೀಸ್ ಸೇವೆಗಳು–ಬಿ)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎನ್ ರವೀಂದ್ರ, ಪಿ.ಎಸ್.ಐ., ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಬೆಂಗಳೂರು ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ :**

1) ಶಿಸ್ತು ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ ಇವರ ಆದೇಶ ಸಂಖ್ಯೆ: ಡಿಇ/387/ಉವ/2009 ದಿನಾಂಕ: 06.11.2012.
2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಹಿಂಬರಹ ಸಂಖ್ಯೆ: ಅಪೀಲು(4)/21/2013–14 ದಿನಾಂಕ: 26.08.2013
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 31.08.2013
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು. ಇವರ ಪತ್ರ ಸಂಖ್ಯೆ: ಅಪೀಲು(2)46/2013–14 ದಿನಾಂಕ 21.11.2013.

**ಪ್ರಸ್ತಾವನೆ:–**

ಶ್ರೀ ಎನ್.ರವೀಂದ್ರ, ಪಿಎಸ್ಐ, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಬೆಂಗಳೂರು ಜಿಲ್ಲೆ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಈ ಹಿಂದೆ ಬಾದಾಮಿ ಪೊಲೀಸ್ ಠಾಣೆ, ಬಾಗಲಕೋಟೆ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ಘೋರ ನಿರ್ಲಕ್ಷ್ಯತನ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣಗಳ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಆಪಾದಿತ ಪೊಲೀಸ್ ಅಧಿಕಾರಿಯಾದ ಶ್ರೀ ಎನ್ ರವೀಂದ್ರ, ಪಿಎಸ್ಐ, ಕೊಪ್ಪಳ ಗ್ರಾಮೀಣ ಪೊಲೀಸ್ ಠಾಣೆ ನೀವು ಈ ಮೊದಲು ಬದಾಮಿ ಪೊಲೀಸ್ ಠಾಣೆಯಲ್ಲಿ ಸೇವೆ ಸಲ್ಲಿಸುತ್ತಿರುವಾಗ ನೀವು

1) ದಿನಾಂಕ: 17.05.2009ರಂದು ಬದಾಮಿಯ ನಾರ್ಥ ಪೋರ್ಟ್ ಏರಿಯಾದ ಅಪ್ಪರ ಶಿವಾಲಯದ ಹತ್ತಿರ ಕಲ್ಲಿನ ಬಂಡೆಯನ್ನು ಯಾರೋ ದುಷ್ಕರ್ಮಿಗಳು ಬ್ಲಾಷ್ಟ ಮಾಡಿ ಒಡೆದು ಹಾಕಿರುತ್ತಾರೆಂದು, ತಿಳಿಸಿ ಮುಂದಿನ ಕ್ರಮ ಕೈಗೊಳ್ಳಬೇಕೆಂದು ಸಹಾಯಕ ಸಂರಕ್ಷಣಾಧಿಕಾರಿಗಳು, ಭಾರತೀಯ ಪುರಾತತ್ವ ಇಲಾಖೆ, ಬದಾಮಿ ಇವರು ಲಿಖಿತವಾಗಿ ತಿಳಿಸಿದ ನಂತರ ಘಟನಾ ಸ್ಥಳಕ್ಕೆ ಭೇಟಿ ನೀಡಿ ಅವಶ್ಯಕ ಮಾಹಿತಿ ಸಂಗ್ರಹಿಸಿ ತಕ್ಷಣ ಅಪರಾಧ ಪ್ರಕರಣ ದಾಖಲಿಸಲು ವಿಫಲರಾಗಿರುತ್ತೀರಿ.
2) ತಕ್ಷಣ ಅಪರಾಧ ಪ್ರಕರಣ ದಾಖಲಿಸಲು ವಿಫಲರಾಗಿದ್ದುದರಿಂದಲೇ ಪುನಃ ದಿ: 26.05.2009ರಂದು ಅದೇ ಕಲ್ಲು ಬಂಡೆಯನ್ನು ಯಾರೋ ದುಷ್ಕರ್ಮಿಗಳು ಮತ್ತೆ ಬ್ಲಾಸ್ಟ್ ಮಾಡಿ ಅಪರಾಧವೆಸಗಲು ಕಾರಣೀಭೂತರಾಗಿರುತ್ತೀರಿ.
3) ದಿನಾಂಕ: 17.05.2009 ರಂದು ಹಾಗೂ ದಿನಾಂಕ: 26.05.2009ರಂದು ನಡೆದ ಘಟನೆಯ ಬಗ್ಗೆ ಮೇಲಾಧಿಕಾರಿಗಳಿಗೆ ಬಾತ್ಮಿ ತಿಳಿಸಲು ಸಹ ವಿಫಲರಾಗಿರುತ್ತೀರಲ್ಲದೇ, ಯಾವುದೇ ಸಂರಕ್ಷಣಾತ್ಮಕ ಕ್ರಮಗಳನ್ನು ಜರುಗಿಸದೇ ಅಪರಾಧ ಪ್ರಕರಣ ಮುಚ್ಚಿ ಹಾಕಲು ಪ್ರಯತ್ನಿಸಿರುತ್ತೀರಿ.
4) ತುಂಬಾ ವಿಳಂಬ ಮಾಡಿ ದಿನಾಂಕ: 27.05.2009ರಂದು 1800 ಗುಂಟೆಗೆ ಅಪರಾಧ ಪ್ರಕರಣ ಸಂಖ್ಯೆ: 109/2009ನೇದ್ದನ್ನು ದಾಖಲಿಸಿರುತ್ತೀರಿ.

ಈ ರೀತಿ ಆಪಾದಿತ ಪೊಲೀಸ್ ಅಧಿಕಾರಿಯಾದ ನೀವು ನಿಮ್ಮ ಜವಾಬ್ದಾರಿಯುತ ಕರ್ತವ್ಯದಲ್ಲಿ ಘೋರ ನಿರ್ಲಕ್ಷ್ಯತನ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿರುತ್ತೀರಿ.

ಇಲಾಖಾ ವಿಚಾರಣೆಯಲ್ಲಿ ಆಪೊಅ.ರವರ ಮೇಲಿನ ಆಪಾದನೆಗಳು ಸಾಬೀತಾಗಿದೆಯೆಂದು ವಿಚಾರಣಾಧಿಕಾರಿಗಳು ಅಭಿಪ್ರಾಯ ನೀಡಿದ್ದು, ಅದರಂತೆ ಆ.ಪೊ.ಅ.ರವರಿಗೆ ಕಾರಣ ಕೇಳುವ ನೋಟೀಸ್ ಜಾರಿ ಮಾಡಿ, ಆ.ಪೊ.ಅ.ರವರು ನೀಡಿದ ಸಮಜಾಯಿಷಿಯನ್ನು ಒಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 06.11.2012ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಒಂದು (01) ವರ್ಷ ಕಾಲ ಮುಂದೂಡಲಾದ ದಂಡನೆಯನ್ನು ವಿಧಿಸಲಾಗಿದೆ.

ಶಿಸ್ತು ಪ್ರಾಧಿಕಾರದ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 26.08.2013ರ ಹಿಂಬರಹದಲ್ಲಿ ಮೇಲ್ಮನವಿಯನ್ನು ಪರಿಶೀಲಿಸಲು ನಿಯಮಗಳನ್ವಯ ಅವಕಾಶವಿಲ್ಲವೆಂದು ತಿಳಿಸಿ, ಅವಶ್ಯವಿದ್ದಲ್ಲಿ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸುವಂತೆ ತಿಳಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣಾ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪ್ರಸ್ತುತ ಪ್ರಕರಣದಲ್ಲಿ ಅರ್ಜಿದಾರರಿಗೆ ನೀಡಿದ ದಂಡನೆಯು ಆರೋಪಗಳಿಗೆ ಅನುಗುಣವಾಗಿರುವ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 123 ಪೊಸಿಅ 2013 ಬೆಂಗಳೂರು, ದಿನಾಂಕ: 25.08.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎನ್ ರವೀಂದ್ರ, ಪಿ.ಎಸ್.ಐ., ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಬೆಂಗಳೂರು ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**PR.713**

**ದೇವೇಂದ್ರಪ್ಪ ಕಟ್ಟಿಮನಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ(ಪೊಲೀಸ್ ಸೇವೆಗಳು–ಬಿ)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಹೆಚ್ ಶ್ರೀನಿವಾಸ್, ಪಿ.ಐ., ಸಿ.ಸಿ.ಬಿ., (ಎಸ್.ಈ.). ಬೆಂಗಳೂರು ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ :**

1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ, ತುಮಕೂರು ಇವರ ಆದೇಶ ಸಂಖ್ಯೆ: ಪನ್ಸಿ/145/01 (ಓ.ಬಿ.ಸಂಖ್ಯೆ: 80/02) ದಿನಾಂಕ: 19.06.2002.
2) ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರ ಅದೇಶ ಸಂಖ್ಯೆ: ಅಪೀಲು/18/2002–03 (ಓ.ಬಿ.ಸಂಖ್ಯೆ: 124/2002–03) ದಿನಾಂಕ: 19.10.2002
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 06.05.2014.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು. ಇವರ ಪತ್ರ ಸಂಖ್ಯೆ: ಅಪೀಲು(2)17/2014–15 ದಿನಾಂಕ 16.07.2014.

**ಪ್ರಸ್ತಾವನೆ:–**

ಶ್ರೀ ಹೆಚ್ ಶ್ರೀನಿವಾಸ್, ಪಿ.ಐ. ಸಿಸಿಬಿ (ಎಸ್ಈ), ಬೆಂಗಳೂರು ನಗರ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಈ ಹಿಂದೆ ಪಿ.ಎಸ್.ಐ., ಕ್ಯಾತಸಂದ್ರ ಪೊಲೀಸ್ ಠಾಣೆ, ತುಮಕೂರು ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯ ನಿರ್ಲಕ್ಷ್ಯತೆ ಹಾಗೂ ಅಶಿಸ್ತನ್ನು ಪ್ರದರ್ಶಿಸಿದ ಕಾರಣಗಳ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

1) ದಿನಾಂಕ 19.12.01ರಂದು ರಾತ್ರಿ 11.30 ಗಂಟೆ ಸಮಯಲ್ಲಿ ಡಿಎಸ್‌ಪಿ ನಗರ ರವರು ಠಾಣೆಗೆ ಭೇಟಿ ನೀಡಿ ಪರಿಶೀಲಿಸಿದ್ದು. ಆ ಸಮಯದಲ್ಲಿ ದಿನಚರಿಯಲ್ಲಿ ನಮೂದಿಸದೇ ಜೀಪನ್ನು ತೆಗೆದುಕೊಂಡು ಹೋದ ಬಗ್ಗೆ ಸಿಪಿಐ ರವರು ನೀಡಿದ ಜ್ಞಾಪನಕ್ಕೆ ಸಮಜಾಯಿಷಿಯನ್ನು ನೀಡದೇ ಕರ್ತವ್ಯದಲ್ಲಿ ನಿರ್ಲಕ್ಷ್ಯತೆ ತೋರಿರುತ್ತೀರಿ.
2) ದಿನಾಂಕ 11.12.01ರಂದು ರಾತ್ರಿ ನೀವು ಅನಧೀಕೃತವಾಗಿ ಸರ್ಕಾರಿ ಜೀಪನ್ನು ಸ್ವಂತ ಕೆಲಸಕ್ಕೆ ತೆಗೆದುಕೊಂಡು ಹೋಗಿ ಕರ್ತವ್ಯದಲ್ಲಿ ಅಶಿಸ್ತನ್ನು ಪ್ರದರ್ಶಿಸಿ ಹಾಗೂ ಕರ್ತವ್ಯದಲ್ಲಿ ಲೋಪವೆಸಗಿರುತ್ತೀರಿ.

ಮೇಲಿನ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧಿಕ್ಷಕರು, ತುಮಕೂರು ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 19.08.2002ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಮುಂಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಮುಂಬಡ್ತಿಗೆ ಧಕ್ಕೆಯಾಗದಂತೆ ಮೂರು (3) ತಿಂಗಳ ಕಾಲ ಮುಂದೂಡಲಾದ ದಂಡನೆಯನ್ನು ವಿಧಿಸಿದೆ.

ಶಿಸ್ತು ಪ್ರಾಧಿಕಾರದ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 19.10.2002ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರದ ಆದೇಶವನ್ನು ಮಾರ್ಪಡಿಸಿ, ಆ.ಪೊ.ಅ.ರವರಿಗೆ "ಲಿಖಿತ ಎಚ್ಚರಿಕೆಯನ್ನು" ನೀಡಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪ್ರಸ್ತುತ ಪ್ರಕರಣದಲ್ಲಿ ಆ.ಪೊ.ಅ.ರವರಿಗೆ ಮೇಲ್ಮನವಿ ಪ್ರಾಧಿಕಾರವು ಲಿಖಿತ ಎಚ್ಚರಿಕೆ ನೀಡಿ ಆದೇಶಿಸಿದ್ದು, ಇದು ಇಲಾಖಾ ವಿಚಾರಣೆ ನಿಯಮಾವಳಿಗಳ ಪ್ರಕಾರ ದಂಡನೆಯಾಗಿರುವುದಿಲ್ಲ. **"ಎಚ್ಚರಿಕೆ"** ನೀಡುವುದು ಆಡಳಿತಾತ್ಮಕ ಕ್ರಮವಾಗಿದ್ದು, ಇದರ ವಿರುದ್ಧ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಲು ಅವಕಾಶ ಇಲ್ಲದ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 52 ಪೊಸಿಅ 2014 ಬೆಂಗಳೂರು, ದಿನಾಂಕ: 25.08.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹೆಚ್ ಶ್ರೀನಿವಾಸ್, ಪಿ.ಐ., ಸಿಸಿಬಿ(ಎಸ್‌ಈ), ಬೆಂಗಳೂರು ನಗರ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

PR.714

**ದೇವೆಂದ್ರಪ್ಪ ಕಟ್ಟಿಮನಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ(ಪೊಲೀಸ್ ಸೇವೆಗಳು-ಬಿ)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಡಿ.ಬಿ. ಪಾಟೀಲ್, ಪಿಎಸ್‌ಐ, ರೋಣ ಪೊಲೀಸ್ ಠಾಣೆ, ಗದಗ ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರ ಹಾಗೂ ಆರಕ್ಷಕ, ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ: ಡಿಇ/17(7)/ಉವ/2013 ದಿನಾಂಕ: 15.07.2013.
2) ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು, ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಹಿಂಬರಹ ಸಂಖ್ಯೆ: ಅಪೀಲು(4)/18/2014-15 ದಿನಾಂಕ 19.05.2014
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 06.06.2014.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು. ಇವರ ಪತ್ರ ಸಂಖ್ಯೆ: ಅಪೀಲು(2)17/2014-15 ದಿನಾಂಕ 16.07.2014.

**ಪ್ರಸ್ತಾವನೆ:-**

ಶ್ರೀ ಡಿ.ಬಿ. ಪಾಟೀಲ್, ಪಿಎಸ್‌ಐ, ರೋಣ ಪೊಲೀಸ್ ಠಾಣೆ, ಗದಗ ಜಿಲ್ಲೆ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಈ ಹಿಂದೆ ಕೆರೂರ ಪೊಲೀಸ್ ಠಾಣೆ, ಬಾಗಲಕೋಟೆ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ಘೋರ ನಿರ್ಲಕ್ಷ್ಯತನ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣಗಳ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:-**

"ಆಪಾದಿತ ಪೊಲೀಸ್ ಅಧಿಕಾರಿಯಾದ ನೀವು ಈ ಹಿಂದೆ ಕೆರೂರ ಪೊಲೀಸ್ ಠಾಣೆ, ಬಾಗಲಕೋಟೆ ಜಿಲ್ಲೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಫಿರ್ಯಾದಿದಾರರಾದ ಶ್ರೀ ಸಂಗಮೇಶ ವಾಸಪ್ಪ ಕೋಲಾರ, ಸಾ॥ ಇನಾಮಯರಗೊಪ್ಪ, ತಾ॥ ಬಾದಾಮಿ, ಬಾಗಲಕೋಟೆ ಜಿಲ್ಲೆ ರವರು ಹಾಗೂ ಅದೇ ಗ್ರಾಮದ ಶ್ರೀನಿವಾಸ ಕುಳಲಿ ಇವರ ಮಧ್ಯೆ ಜಮೀನಿಗೆ ಸಂಬಂಧಿಸಿದ ವ್ಯಾಜ್ಯವಿದ್ದು, ದಿನಾಂಕ: 08.07.2012ರಂದು ಶ್ರೀನಿವಾಸ ಕುಳಲಿ ಹಾಗೂ ಇತರರು ಫಿರ್ಯಾದಿಗೆ ಹೊಡಿಬಡಿ ಮಾಡಿದ ಬಗ್ಗೆ ಫಿರ್ಯಾದಿಯು ಕೆರೂರ ಪೊಲೀಸ್ ಠಾಣೆಯಲ್ಲಿ ದೂರು ದಾಖಲಿಸಿದ್ದು, ಸದರಿ ದೂರಿನ ಮೇಲಿಂದ ನೀವು ಫಿರ್ಯಾದಿ ಹಾಗೂ ಎದುರು ಪಾರ್ಟಿ ಶ್ರೀನಿವಾಸ ಕುಳಲಿ ಇವರುಗಳ ಮೇಲೆ 107 ಸಿಆರ್‌ಪಿಸಿ ಪ್ರಕಾರ ಕ್ರಮ ಜರುಗಿಸಿದ್ದು ಇರುತ್ತದೆ. ದಿನಾಂಕ14.08.2012ರಂದು ಫಿರ್ಯಾದಿಗೆ ಎದುರುದಾರ ಶ್ರೀನಿವಾಸ ಕುಳಲಿ ಇವರು ಅಡ್ಡಗಟ್ಟಿ ತಕರಾರು ಮಾಡಿದ ಬಗ್ಗೆ ಕೆರೂರ ಪೊಲೀಸ್ ಠಾಣೆಗೆ ದೂರು ಕೊಡಲು ಬಂದಾಗ ಈಗಾಗಲೇ ಶ್ರೀನಿವಾಸ ಕುಳಲಿ ನಿಮ್ಮ ಮೇಲೆ ಅರ್ಜಿ ಕೊಟ್ಟಿರುತ್ತಾರೆ ಅಂತಾ ಹೇಳಿ ಗ್ರಾಮದ ಹಿರಿಯರ ಸಮಕ್ಷಮ ಎರಡು ಪಕ್ಷದವರನ್ನು ಕರೆಯಿಸಿ ರಾಜೀ ಮಾಡಿಸಿ ಕಳುಹಿಸಿದ್ದು, ಇದಕ್ಕೆ ಸಂಬಂಧಪಟ್ಟಂತೆ ಲಕ್ಷ್ಮಣ ಎಂಬುವವರ ಮೂಲಕ ಫಿರ್ಯಾದಿಯಿಂದ ರೂ. 10,000/-ಗಳ ಲಂಚದ ಬೇಡಿಕೆಯೊಡ್ಡಿ, ಕೊನೆಗೆ ರೂ. 5,000/-ಗಳ ಲಂಚದ ಬೇಡಿಕೆಯಿಟ್ಟಿರುವ ಕುರಿತು ವಾಯಿಸ್ ರೆಕಾರ್ಡ್ ಮಾಡಿದ್ದು, ಲೋಕಾಯುಕ್ತ ರವರ ವರದಿಯಿಂದ ಕಂಡು ಬಂದಿರುವುದು. ಇದರಿಂದ ನೀವು ನಿಮ್ಮ ಕರ್ತವ್ಯದಲ್ಲಿ ಘೋರ ನಿರ್ಲಕ್ಷ್ಯತನ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿದ್ದೀರಿ."

ಮೇಲಿನ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 15.07.2013ರ ಆದೇಶದಲ್ಲಿ ಅರ್ಜಿದಾರರ ಮುಂಬರುವ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಒಂದು (01) ವರ್ಷ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದೆ.

ಈ ಆದೇಶದ ವಿರುದ್ಧ ಕಾಲ ವಿಳಂಬವಾಗಿ ಸಲ್ಲಿಸಿದೆ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 19.05.2014ರ ಹಿಂಬರಹದಲ್ಲಿ ಮೇಲ್ಮನವಿಯನ್ನು ಪರಿಶೀಲಿಸಲು ನಿಯಮಗಳನ್ವಯ ಅವಕಾಶವಿಲ್ಲವೆಂದು ತಿಳಿಸಿ, ಅವಶ್ಯವಿದ್ದಲ್ಲಿ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸುವಂತೆ ತಿಳಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಆ.ಪೊ.ಅ.ರವರಿಗೆ ನೀಡಿದ ದಂಡನೆಯು ಆರೋಪಕ್ಕೆ ಅನುಗುಣವಾಗಿದ್ದು, ಪರಿಷ್ಕರಣ ಮೇಲ್ಮನವಿಯನ್ನು ಪುರಸ್ಕರಿಸಲು ಯಾವುದೇ ಸಮರ್ಥನೆಗಳು ಇರದ ಕಾರಣ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 70 ಪೊಸಿಅ 2014 ಬೆಂಗಳೂರು, ದಿನಾಂಕ: 25.08.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಡಿ.ಬಿ. ಪಾಟೀಲ್, ಪಿಎಸ್ಐ, ರೋಣ ಪೊಲೀಸ್ ಠಾಣೆ, ಗದಗ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**PR.715**

**ದೇವೇಂದ್ರಪ್ಪ ಕಟ್ಟಿಮನಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ(ಪೊಲೀಸ್ ಸೇವೆಗಳು–ಬಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಕೊಪ್ಪಳ ಜಿಲ್ಲೆ, ಹಿರೇಹಳ್ಳ ಯೋಜನೆಯ ನೀರಾವರಿ ಸಲಹಾ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ನೀರಾವರಿ ಕೇಂದ್ರ ವಲಯ, ಮುನಿರಾಬಾದ್ ರವರ ಪತ್ರ ಸಂಖ್ಯೆ : ಮು.ಇಂ/ನೀ.ಕೇ.ವ/ತಾಸ–5/ಸಅ–11/2013–14/1534, ದಿನಾಂಕ : 03–08–2013

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ, ಮುಖ್ಯ ಇಂಜಿನಿಯರ್, ನೀರಾವರಿ ಕೇಂದ್ರ ವಲಯ, ಮುನಿರಾಬಾದ್ ಇವರು, ಅಧಿಕಾರಿ ಸದಸ್ಯರು ಹಾಗೂ ಅಧಿಕಾರೇತರ ಸದಸ್ಯರುಗಳ ಪಟ್ಟಿಯೊಂದಿಗೆ ವಿಷಯದ ಬಗ್ಗೆ ಪ್ರಸ್ತಾವನೆ ಸಲ್ಲಿಸುತ್ತಾ, ಕೊಪ್ಪಳ ಜಿಲ್ಲೆ, ಹಿರೇಹಳ್ಳ ಯೋಜನೆಯ ನೀರಾವರಿ ಸಲಹೆ ಸಮಿತಿಯನ್ನು ರಚಿಸುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಜಸಂಇ 57 ಎಂಟಿಪಿ 2011, ಬೆಂಗಳೂರು, ದಿನಾಂಕ : 03–06–2014.**

ಕೊಪ್ಪಳ ಜಿಲ್ಲೆಯ ಹಿರೇಹಳ್ಳ ಯೋಜನೆಯಡಿಯಲ್ಲಿ, ನೀರಾವರಿಗಾಗಿ ಹಾಗೂ ಸಮರ್ಪಕ ನೀರು ನಿರ್ವಹಣೆ ಮಾಡುವ ಸಲುವಾಗಿ, ಅಧಿಕಾರಿ ಸದಸ್ಯರು ಹಾಗೂ ಅಧಿಕಾರೇತರ ಸದಸ್ಯರುಗಳನ್ನೊಳಗೊಂಡ ಹಿರೇಹಳ್ಳ ಯೋಜನೆಯ ನೀರಾವರಿ ಸಲಹಾ ಸಮಿತಿಯನ್ನು ಈ ಕೆಳಕಂಡಂತೆ ರಚಿಸಲಾಗಿದೆ.

**ಅಧ್ಯಕ್ಷರು :–** ಸನ್ಮಾನ್ಯ ಶ್ರೀ ಶಿವರಾಜ್ ಎಸ್. ತಂಗಡಗಿ, ಮಾನ್ಯ ಸಣ್ಣ ನೀರಾವರಿ ಸಚಿವರು ಹಾಗೂ ಕೊಪ್ಪಳ ಜಿಲ್ಲಾ ಉಸ್ತುವಾರಿ ಸಚಿವರು.

**ಅಧಿಕಾರಿ ಸದಸ್ಯರು :–**

1. ಜಿಲ್ಲಾಧಿಕಾರಿಗಳು, ಕೊಪ್ಪಳ ಜಿಲ್ಲೆ, ಕೊಪ್ಪಳ.
2. ಕಾರ್ಯನಿರ್ವಾಹಕ ಅಭಿಯಂತರರು, ನಂ. 1, ತುಂಗಭದ್ರಾ ಜಲಾಶಯ ವಿಭಾಗ, ಮುನಿರಾಬಾದ್ – ಸದಸ್ಯ ಕಾರ್ಯದರ್ಶಿಗಳು
3. ತಹಶೀಲ್ದಾರರು, ಕೊಪ್ಪಳ ತಾಲ್ಲೂಕು
4. ಸಹಾಯಕ ಕೃಷಿ ನಿರ್ದೇಶಕರು, ಕೊಪ್ಪಳ

**ಅಧಿಕಾರೇತರ ಸದಸ್ಯರು :–**

1. ಸನ್ಮಾನ್ಯ ಲೋಕಸಭಾ ಸದಸ್ಯರು, ಕೊಪ್ಪಳ.
2. ಸನ್ಮಾನ್ಯ ವಿಧಾನಸಭಾ ಸದಸ್ಯರು, ಕೊಪ್ಪಳ ಕ್ಷೇತ್ರ, ಕೊಪ್ಪಳ ಜಿಲ್ಲೆ.
3. ಸನ್ಮಾನ್ಯ ವಿಧಾನಸಭಾ ಸದಸ್ಯರು, ಗಂಗಾವತಿ ಕ್ಷೇತ್ರ, ಕೊಪ್ಪಳ ಜಿಲ್ಲೆ.
4. ಸನ್ಮಾನ್ಯ ವಿಧಾನಸಭಾ ಸದಸ್ಯರು, ಯಲಬುರ್ಗಾ ಕ್ಷೇತ್ರ, ಕೊಪ್ಪಳ ಜಿಲ್ಲೆ.
5. ಸನ್ಮಾನ್ಯ ವಿಧಾನ ಪರಿಷತ್ ಸದಸ್ಯರು, ಕೊಪ್ಪಳ.
6. ಸನ್ಮಾನ್ಯ ಜಿಲ್ಲಾ ಪಂಚಾಯತ್ ಅಧ್ಯಕ್ಷರು, ಕೊಪ್ಪಳ

ಸದರಿ ಸಮಿತಿಯ ಅಧಿಕಾರೇತರ ಸದಸ್ಯರ ಪ್ರವಾಸ ಭತ್ಯೆ ಮತ್ತು ಇತರೆ ಭತ್ಯೆಗಳನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ : 03-02-2001ರನ್ವಯ ಪಾವತಿ ಮಾಡತಕ್ಕದ್ದು, ಈ ಬಗ್ಗೆ ತಗಲುವ ವೆಚ್ಚವನ್ನು ಕರ್ನಾಟಕ ನೀರಾವರಿ ನಿಗಮ ನಿಯಮಿತದಡಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

P.R. 723
SC-50

**ಸಿ. ಶ್ರೀನಿವಾಸುಲು**
ಸರ್ಕಾರದ ಅಧೀನ ಕಾರ್ಯದರ್ಶಿ (ತಾಂತ್ರಿಕ-1),
ಜಲ ಸಂಪನ್ಮೂಲ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಶ್ರೀ ಶಿವಲಿಂಗಯ್ಯ ಮೋಹನ್, ಚೀಫ್ ಸೈಂಟಿಫಿಕ್ ಆಫೀಸರ್, ಪ್ರಾದೇಶಿಕ ಔಷಧ ಪರೀಕ್ಷಾ ಪ್ರಯೋಗಾಲಯ, ಹುಬ್ಬಳ್ಳಿ ಇವರ ಅಮಾನತ್ತಿನ ಅವಧಿಯನ್ನು ಕರ್ತವ್ಯದ ಅವಧಿಯೆಂದು ಪರಿಗಣಿಸುವ ಬಗ್ಗೆ.

**ಓದಲಾಗಿದೆ :** ಔಷಧ ನಿಯಂತ್ರಣ ಇಲಾಖೆರವರ ಪತ್ರ ಸಂಖ್ಯೆ : ಔನಿಇ/146/ಸಿಬ್ಬಂದಿ/2014-15, ದಿನಾಂಕ : 19-06-2014 ಮತ್ತು 05-08-2014.

**ಪ್ರಸ್ತಾವನೆ :**

ಔಷಧ ನಿಯಂತ್ರಕರು ಮೇಲೆ ಓದಲಾದ ಪತ್ರಗಳಲ್ಲಿ ಶ್ರೀ ಶಿವಲಿಂಗಯ್ಯ ಮೋಹನ್, ಇವರು ಸೈಂಟಿಫಿಕ್ ಆಫೀಸರ್ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಕರ್ತವ್ಯ ನಿರ್ಲಕ್ಷತೆಯ ಕಾರಣ ಸರ್ಕಾರಿ ಆದೇಶ ಸಂಖ್ಯೆ : ಆಕುಕ 121 ಐಎಂಎಂ 2008, ದಿನಾಂಕ : 18-09-2008ರಲ್ಲಿ ಅಮಾನತ್ತುಗೊಳಿಸಿ ತದನಂತರ ದಿನಾಂಕ : 08-05-2009ರ ಅಧಿಸೂಚನೆಯನ್ವಯ ವಿಚಾರಣೆ ಕಾಯ್ದಿರಿಸಿ, ಸೇವೆಯಲ್ಲಿ ಪುನರ್ ಸ್ಥಾಪಿಸಿ, ಇವರನ್ನು ಪ್ರಾದೇಶಿಕ ಔಷಧ ಪರೀಕ್ಷಾ ಪ್ರಯೋಗಾಲಯ, ಬಳ್ಳಾರಿ, ಇಲ್ಲಿಗೆ ಸ್ಥಳನಿಯುಕ್ತಿಗೊಳಿಸಲಾದ ಹಿನ್ನೆಲೆಯಲ್ಲಿ ಸದರಿ ಅಧಿಕಾರಿಯವರು ದಿನಾಂಕ : 13-05-2009ರಂದು ಅಧಿಕಾರಿಯವರು ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ. ಸದರಿ ಅಧಿಕಾರಿಯವರ ವಿರುದ್ಧ ಮಾಡಲಾದ ಕೆಲವೊಂದು ಆಪಾದನೆಗಳು ಸಾಬೀತಾಗಿರುವುದರಿಂದ ಇವರಿಗೆ ಸರ್ಕಾರಿ ಆದೇಶ ಸಂಖ್ಯೆ (1) ಆಕುಕ 121 ಐಎಂಎಂ 2008, ದಿನಾಂಕ : 12-09-2011ರಲ್ಲಿ ಕೆ.ಸಿ.ಎಸ್. (ಸಿ.ಸಿ.ಎ) ನಿಯಮಾವಳಿಗಳು 1957ರ ನಿಯಮ 8 (ii) ರಂತೆ "ವಾಗ್ದಂಡನೆ" ವಿಧಿಸಿ ಆದೇಶಿಸಿದೆ.

ಸರ್ಕಾರಿ ಅಧಿಸೂಚನೆ ಸಂಖ್ಯೆ : ಆಕುಕ 156 ಐಎಂಎಂ 201, ದಿನಾಂಕ : 01-03-2014ರನ್ವಯ ಶ್ರೀ ಶಿವಲಿಂಗಯ್ಯ ಮೋಹನ್, ಸೈಂಟಫಿಕ್ ಆಫೀಸರ್ ಇವರಿಗೆ ಚೀಫ್ ಸೈಂಟಿಫಿಕ್ ಆಫೀಸರ್ ಹುದ್ದೆಗೆ ಮುಂಬಡ್ತಿ ನೀಡಿ ಪ್ರಾದೇಶಿಕ ಔಷಧ ಪರೀಕ್ಷಾ ಪ್ರಯೋಗಾಲಯ, ಹುಬ್ಬಳ್ಳಿ ಇಲ್ಲಿಗೆ ಸ್ಥಳ ನಿಯುಕ್ತಿಗೊಳಿಸಲಾಗಿದೆ. ಸದರಿ ಅಧಿಕಾರಿಯವರಿಗೆ ದಿನಾಂಕ : 12-09-2011ರ ದಂಡನಾದೇಶದಲ್ಲಿ ವಿಧಿಸಿರುವ ಅಮಾನತ್ತಿನ ಅವಧಿಯನ್ನು ಯಾವ ರೀತಿ ಪರಿಗಣಿಸಬೇಕು ಎಂಬ ಬಗ್ಗೆ ಸೂಕ್ತ ಆದೇಶ ಹೊರಡಿಸಿರುವುದಿಲ್ಲವಾದ್ದರಿಂದ ಈ ಕುರಿತು ಕೆ.ಸಿ.ಎಸ್. ನಿಯಮ 99ರನ್ವಯ ಸೂಕ್ತ ಆದೇಶ ಹೊರಡಿಸುವುದು ಅಗತ್ಯವಾಗಿರುತ್ತದೆ ಎಂಬ ಅಭಿಪ್ರಾಯದೊಂದಿಗೆ ಔಷಧ ನಿಯಂತ್ರಕರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು ಶ್ರೀ ಶಿವಲಿಂಗಯ್ಯ ಮೋಹನ್, ಚೀಫ್ ಸೈಂಟಿಫಿಕ್ ಆಫೀಸರ್ ಇವರ ವಿರುದ್ಧದ ಕೆಲವು ಆರೋಪಗಳು ಇಲಾಖಾ ವಿಚಾರಣೆಯಲ್ಲಿ ದೃಢಪಟ್ಟಿರುವುದರಿಂದ ಕನಿಷ್ಠ ದಂಡನೆಯಾದ ವಾಗ್ದಂಡನೆಯನ್ನು ವಿಧಿಸಲಾಗಿದೆ. ಈ ದಂಡನೆಯು ಯಾವುದೇ ಮುಂಬಡ್ತಿಗೆ ಅಡ್ಡ ಪರಿಣಾಮ ಉಂಟು ಮಾಡದ ಕಾರಣ ಬಡ್ತಿಯನ್ನು ಪರಿಗಣಿಸಲಾಗಿದೆ. ಆದರೆ ಈ ಪ್ರಕರಣದಲ್ಲಿ ವಿಧಿಸಿದ ದಂಡನೆಯು ಅಧಿಕಾರಿಯವರ ಸೇವಾ ನಮೂನೆಯಲ್ಲಿ ದಾಖಲಾಗಲಿರುವುದರಿಂದ ಸದರಿ ಅಧಿಕಾರಿಯವರು ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತಿನ ಅವಧಿಯೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಕುಕ 139 ಐಎಂಎಂ 2014, ಬೆಂಗಳೂರು, ದಿನಾಂಕ : 30-08-2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಶಿವಲಿಂಗಯ್ಯ ಮೋಹನ್, ಚೀಫ್ ಸೈಂಟಿಫಿಕ್ ಆಫೀಸರ್, ಪ್ರಾದೇಶಿಕ ಔಷಧ ಪರೀಕ್ಷಾ ಪ್ರಯೋಗಾಲಯ, ಹುಬ್ಬಳ್ಳಿ ಇವರು ದಿನಾಂಕ : 18-09-2008 ರಿಂದ 12-05-2009ರವರೆಗೆ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತಿನ ಅವಧಿಯೆಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

P.R. 724

**ಬಿ. ಕಮಲಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,
(ಭಾರತೀಯ ವೈದ್ಯ ಪದ್ಧತಿ).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ॥ ಗೀತಾಶ್ರೀ ಹೆಚ್.ಸಿ. ಇವರಿಗೆ ಬೋಧನಾ ಶುಲ್ಕ ಮರುಪಾವತಿಸಲು ವಿಳಂಬ ಮನ್ನಾ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಆಡಳಿತಾಧಿಕಾರಿಗಳು, ವೈದ್ಯಕೀಯ ಶಿಕ್ಷಣ ಇವರ ದಿನಾಂಕ : 03-07-2014ರ ಪತ್ರ ಸಂಖ್ಯೆ : ವೈಶಿ/ಯುಜಿ-ಪಿಜಿ/ಶುಮ/04/2014-15.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಆಡಳಿತಾಧಿಕಾರಿಗಳು, ವೈದ್ಯಕೀಯ ಶಿಕ್ಷಣ ಡಾ॥ ಗೀತಾಶ್ರೀ ಹೆಚ್.ಸಿ. ಇವರು 2013–14ನೇ ಸಾಲಿನಲ್ಲಿ ಸ್ನಾತಕೋತ್ತರ ವೈದ್ಯಕೀಯ ಡಿಗ್ರಿ ವ್ಯಾಸಂಗಕ್ಕೆ ಪಿಜಿಇಟಿ ಮೂಲಕ ಸರ್ಕಾರಿ ಕೋಟಾದಡಿಯಲ್ಲಿ ಕೆ.ವಿ.ಜಿ. ಮೆಡಿಕಲ್ ಕಾಲೇಜು, ಸುಳ್ಯ ಇಲ್ಲಿಗೆ ಪ್ರವೇಶ ಪಡೆದಿರುವ ಪರಿಶಿಷ್ಟ ಜಾತಿಯ ವಿದ್ಯಾರ್ಥಿನಿಯಾಗಿದ್ದು, ಇವರು ನಿರ್ದೇಶನಾಲಯಕ್ಕೆ ಸಲ್ಲಿಸಿರುವ ಮನವಿಯನ್ವಯ ಪರಿಶೀಲಿಸಲಾಗಿ, ವಿದ್ಯಾರ್ಥಿನಿಯು ಸೀಟನ್ನು ಆಯ್ಕೆ ಮಾಡಿಕೊಂಡಾಗ ಆರ್‌ಜಿಯುಹೆಚ್ಎಸ್ ಗೆ ಪಾವತಿಸಿದ್ದ ರೂ. 3,35,000/– ಗಳನ್ನು ಕಾಲೇಜಿಗೆ ಪಾವತಿಸಿದ್ದರೆ, ವಿದ್ಯಾರ್ಥಿನಿಯು ಸಕಾಲದಲ್ಲಿ ಅರ್ಜಿ ಸಲ್ಲಿಸಿ ಈ ಮೊತ್ತವನ್ನು ಮರುಪಾವತಿ ಪಡೆಯಲು ಸಾಧ್ಯವಾಗುತ್ತಿತ್ತು.

ಆದರೆ ಪ್ರವೇಶ ಪ್ರಕ್ರಿಯೆ ಮುಗಿದ ನಂತರ ಆರ್‌ಜಿಯುಹೆಚ್‌ಎಸ್ ನವರು ವಿದ್ಯಾರ್ಥಿನಿಗೆ ನೇರವಾಗಿ ಕಟ್ಟಿದ ಶುಲ್ಕದ ಹಣವನ್ನು ಹಿಂದಿರುಗಿಸಿದ್ದರಿಂದ ಹಾಗೂ ವಿದ್ಯಾರ್ಥಿನಿಯು ಪರಿಶಿಷ್ಟ ಜಾತಿಗೆ ಸೇರಿದ್ದರಿಂದ ವಿದ್ಯಾರ್ಥಿನಿಯ ಪರವಾಗಿ ಕಾಲೇಜಿಗೆ ಸರ್ಕಾರವೇ ಶುಲ್ಕದ ಹಣವನ್ನು ಪಾವತಿಸುತ್ತದೆ ಎಂದು ಕಾಲೇಜಿನವರು ಸಹ ತಿಳಿಸಿದ್ದರಿಂದ 2013–14ನೇ ಸಾಲಿಗೆ ನಿಗದಿತ ಅವಧಿಯಲ್ಲಿ ಈ ನಿರ್ದೇಶನಾಲಯಕ್ಕೆ ಶುಲ್ಕ ಮರುಪಾವತಿ ಕೋರಿ ಅರ್ಜಿ ಸಲ್ಲಿಸಲು ಸಾಧ್ಯವಾಗಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಸದರಿ ವಿದ್ಯಾರ್ಥಿನಿಗೆ ಶುಲ್ಕ ಮರುಪಾವತಿಸಲು ವಿಳಂಬ ಮನ್ನಾ ಆದೇಶ ನೀಡುವಂತೆ ಕೋರಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ, ಡಾ॥ ಗೀತಾಶ್ರೀ ಹೆಚ್.ಸಿ. 2013–14ನೇ ಸಾಲಿನ ಪರಿಶಿಷ್ಟ ಜಾತಿಯ ಪಿಜಿ ಡಿಗ್ರಿ ವಿದ್ಯಾರ್ಥಿನಿ, ಕೆ.ವಿ.ಜಿ. ಮೆಡಿಕಲ್ ಕಾಲೇಜು, ಸುಳ್ಯ ಇವರಿಗೆ ರೂ. 3,35,000/– ಗಳ ಬೋಧನಾ ಶುಲ್ಕವನ್ನು ವಿಳಂಬ ಮನ್ನಾ ಮಾಡಿ ಈ ಸಾಲಿನಲ್ಲಿ ಮರುಪಾವತಿಸಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಕುಕ 292 ಆರ್‌ಜಿಯು 2014, ಬೆಂಗಳೂರು, ದಿನಾಂಕ : 05–09–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಡಾ॥ ಗೀತಾಶ್ರೀ ಹೆಚ್.ಸಿ. 2013–14ನೇ ಸಾಲಿನ ಪರಿಶಿಷ್ಟ ಜಾತಿಯ ಪಿಜಿ ಡಿಗ್ರಿ ವಿದ್ಯಾರ್ಥಿನಿ, ಕೆ.ವಿ.ಜಿ. ಮೆಡಿಕಲ್ ಕಾಲೇಜು, ಸುಳ್ಯ ಇವರಿಗೆ ರೂ. 3,35,000/–ಗಳ ಬೋಧನಾ ಶುಲ್ಕವನ್ನು ಈ ಸಾಲಿನಲ್ಲಿ ಮರುಪಾವತಿಸಲು ವಿಳಂಬ ಮನ್ನಾ ಮಾಡಿ ಆದೇಶಿಸಿದೆ.

ವೈದ್ಯಕೀಯ ಶಿಕ್ಷಣ ನಿರ್ದೇಶಕರು ಬೋಧನಾ ಶುಲ್ಕವನ್ನು ಮರುಪಾವತಿಸುವ ಮುನ್ನ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ–61 ಹಾಗೂ ಅದರ ಅನುಬಂಧ–IIA ರಲ್ಲಿ ತಿಳಿಸಿರುವ ಷರತ್ತುಗಳನ್ನು ಪೂರೈಸಿರುವ ಬಗ್ಗೆ ಖಚಿತಪಡಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು ಟಿಪ್ಪಣಿ ಸಂಖ್ಯೆ : ಆಕುಕ 1390 ಆಂಆಸ 2014, ದಿನಾಂಕ : 20–08–2014ರ ಅಭಿಪ್ರಾಯದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R. 725**

**ಎಸ್.ಕೆ. ನಾಗವೇಣಿ**
ಸರ್ಕಾರದ ಅಧೀನ ಕಾರ್ಯದರ್ಶಿ–2,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,
(ವೈದ್ಯಕೀಯ ಶಿಕ್ಷಣ).

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಸುರಪುರ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆಗೆ ಸರ್ಕಾರದ ಅಂತಿಮ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ನಅಇ:119:ಗುಅಪ್ರಾ:2009, ದಿನಾಂಕ : 02–09–2009.
2. ಸುರಪುರ ಯೋಜನಾ ಪ್ರಾಧಿಕಾರದ ಪತ್ರ ಸಂಖ್ಯೆ : ನಯೋಪ್ರಾಸು:ಮ.ಯೋ: 2012–13/92–93, ದಿನಾಂಕ : 27–02–2013 ಮತ್ತು 11–07–2013.
3. ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರ ಏಕ ಕಡತ ಸಂಖ್ಯೆ : ನಗ್ರಾಯೋ: ಗುವಿ(30): ಸುರಪುರ:ಮ.ಯೋ: ಅಂತಿಮ: 2013–14 ರಲ್ಲಿ ನೀಡಿರುವ ಅಭಿಪ್ರಾಯ ದಿನಾಂಕ : 28–08–2013.

**ಪ್ರಸ್ತಾವನೆ :**

ಮೇಲಿನ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಸುರಪುರ ಪಟ್ಟಣ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆಗೆ ತಾತ್ಕಾಲಿಕ ಅನುಮೋದನೆ ನೀಡಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಸುರಪುರ ಯೋಜನಾ ಪ್ರಾಧಿಕಾರವು, ಸುರಪುರ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಿರುವ ಮಹಾಯೋಜನೆ ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(1)(2)ರನ್ವಯ ಅಗತ್ಯ ಕ್ರಮ ಜರುಗಿಸಿ ಮಹಾ ಯೋಜನೆಯ ನಕ್ಷೆಗಳನ್ನು ಹಾಗೂ ವರದಿಯನ್ನು ತಯಾರಿಸಿ ಸರ್ಕಾರದ ಅಂತಿಮ ಅನುಮೋದನೆಗೆ ಸಲ್ಲಿಸಿದೆ.

ಮೇಲೆ ಓದಲಾದ (3)ರಲ್ಲಿ ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರ ಕಛೇರಿಯ ಕಡತದಲ್ಲಿ ಸುರಪುರ ಪಟ್ಟಣದ ಜನಸಂಖ್ಯೆಯು 2021ರಲ್ಲಿ 82,500 ಗಳಷ್ಟು ಬೆಳವಣಿಗೆಯಾಗುವುದಾಗಿ ಅಂದಾಜಿನ ಮಹಾ ಯೋಜನೆಯನ್ನು ತಯಾರಿಸಲಾಗಿದೆ. ಸುರಪುರ ನಗರದ ಸ್ಥಳೀಯ ಯೋಜನಾ

ಪ್ರದೇಶದ ಒಟ್ಟು 1269.41 ಹೆಕ್ಟೇರ್ ಪ್ರದೇಶವನ್ನು ನಗರದ ಅಭಿವೃದ್ಧಿಗಾಗಿ ನಗರೀಕರಣದ ಎಲ್ಲೆಯೆಂದು ಪ್ರಸ್ತಾಪಿಸಿ ಮಹಾಯೋಜನೆಯನ್ನು ರೂಪಿಸಲಾಗಿದೆ. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ(12)ರಲ್ಲಿ ನಿಗದಿಪಡಿಸಿರುವ ಅಂಶಗಳನ್ನು ಪರಿಗಣಿಸಿ ನಗರದ ಮುಂದಿನ ಯೋಜಿತ ಬೆಳವಣಿಗೆಗೆ ಪ್ರಸ್ತಾಪಿಸಿರುವ 1269.41 ಹೆಕ್ಟೇರ್ ಪ್ರದೇಶದಲ್ಲಿ ವಸತಿಗಾಗಿ 641.82 ಹೆಕ್ಟೇರ್ (ಶೇ. 50.56), ವಾಣಿಜ್ಯಕ್ಕಾಗಿ 56.70 ಹೆಕ್ಟೇರ್ (ಶೇ. 4.47), ಕೈಗಾರಿಕೆಗಾಗಿ 27.91 ಹೆಕ್ಟೇರ್ (ಶೇ. 2.20), ಸಾರ್ವಜನಿಕರ : ಅರೆ ಸಾರ್ವಜನಿಕ ಉಪಯೋಗಕ್ಕೆ 104.81 ಹೆಕ್ಟೇರ್ (ಶೇ. 8.26) ಉದ್ಯಾನವನ ಮತ್ತು ಬಯಲು ಜಾಗಕ್ಕಾಗಿ 121.46 ಹೆಕ್ಟೇರ್ (ಶೇ. 9.57) ಹಾಗೂ ಸಾರಿಗೆ/ಸಂಪರ್ಕ ವಲಯಕ್ಕೆ 311.22 ಹೆಕ್ಟೇರ್ (ಶೇ. 24.51) ನಾಗರೀಕ ಸೌಲಭ್ಯಕ್ಕಾಗಿ 5.49 ಹೆಕ್ಟೇರ್ (ಶೇ. 0.43) ಪ್ರದೇಶವನ್ನು ನಿಗಧಿಪಡಿಸಲಾಗಿದೆ. ಮಹಾಯೋಜನೆಯನ್ನು ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದ್ದು, ಸದರಿ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(3)ರನ್ವಯ ಅಂತಿಮ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 151 ಗುಅಪ್ರಾ 2013, ಬೆಂಗಳೂರು, ದಿನಾಂಕ : 04-09-2014.**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸುರಪುರ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾಯೋಜನೆಗೆ ಈ ಕೆಳಕಂಡ ಷರತ್ತಿಗೊಳಪಟ್ಟು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ 13(3)ರನ್ವಯ ಸರ್ಕಾರದ ಅಂತಿಮ ಅನುಮೋದನೆಯನ್ನು ನೀಡಲಾಗಿದೆ. ಮಹಾ ಯೋಜನೆಗೆ ಅಂತಿಮ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

**ಷರತ್ತು :**

ಈ ಆದೇಶದ ದಿನಾಂಕದಿಂದ ಎರಡು ವರ್ಷಗಳವರೆಗೆ ಪ್ರಾಧಿಕಾರವು ಯಾವುದೇ ಭೂ ಉಪಯೋಗ ಬದಲಾವಣೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಕೂಡದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ರಾಜೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

**PR. 691**

**SC-150**

## ಇಂಧನ ಸಚಿವಾಲಯ

**ವಿಷಯ :** ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದಲ್ಲಿರುವ ಐ.ಜಿ.ಪಿ. (ವಿಚಕ್ಷಣಾ ದಳ) ಹುದ್ದೆಯನ್ನು ರದ್ದುಗೊಳಿಸುವ ಹಾಗೂ ಎಸ್ಕಾಂಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಪೊಲೀಸ್ ಅಧೀಕ್ಷಕರು (ಜಾಗೃತ ದಳ)ಗಳ ನಿಯಂತ್ರಣವನ್ನು ಸಂಬಂಧಿಸಿದ ಎಸ್ಕಾಂಗಳ ವ್ಯವಸ್ಥಾಪಕ ನಿರ್ದೇಶಕರ ಅಧೀನಕ್ಕೊಳಪಡಿಸುವ ಬಗ್ಗೆ.

**ಓದಲಾಗಿದೆ :**

1. ಕಾರ್ಯದರ್ಶಿ, ಕೆಇಬಿ ಇವರ ಆದೇಶ ಸಂಖ್ಯೆ : ಕೆಇಬಿ/ಎಸ್ಎ-III/176/91-92, ದಿನಾಂಕ : 03-02-1992.
2. ಸರ್ಕಾರದ ಆದೇಶ ಸಂಖ್ಯೆ : ಇಎನ್ 84 ಇಇಬಿ 2006, ದಿನಾಂಕ : 16-03-2007.
3. ಅಧಿಸೂಚನೆ ಸಂಖ್ಯೆ : ಇಎನ್ 17 ಇಇಬಿ 2008, ದಿನಾಂಕ : 17-07-2008.

**ಪ್ರಸ್ತಾವನೆ :**

ಕರ್ನಾಟಕ ವಿದ್ಯುಚ್ಛಕ್ತಿ ಮಂಡಳಿ ನಿರ್ದೇಶಕರ ಮಂಡಳಿಯ ದಿನಾಂಕ : 01-02-1992ರ ತೀರ್ಮಾನದಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ಮಂಡಳಿಯಲ್ಲಿ ಒಂದು ಡಿ.ಐ.ಜಿ. (ವಿಚಕ್ಷಣಾ ದಳ) ಹುದ್ದೆಯನ್ನು ಸೃಜಿಸಿ, ಈ ಹುದ್ದೆಯನ್ನು ಕರ್ನಾಟಕ ಸರ್ಕಾರದಿಂದ ನಿಯೋಜನೆ ಮೇಲೆ ಭರ್ತಿ ಮಾಡಲು ತೀರ್ಮಾನಿಸಲಾಗಿದೆ. ನಂತರ ಈ ಹುದ್ದೆಯನ್ನು ಐ.ಜಿ.ಪಿ. ವೃಂದಕ್ಕೆ ಮೇಲ್ದರ್ಜೆಗೇರಿಸಲಾಗಿದೆ.

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಇವರ ದಿನಾಂಕ : 14-12-2006ರ ಪತ್ರದ ಕೋರಿಕೆಯ ಮೇರೆಗೆ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ಐ.ಜಿ.ಪಿ, (ವಿಚಕ್ಷಣ ದಳ) ಹುದ್ದೆಯನ್ನು ರದ್ದುಗೊಳಿಸಿ ಆದೇಶಿಸಲಾಗಿತ್ತು. ತದನಂತರ, ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಅಧಿಸೂಚನೆಯಲ್ಲಿ ಈಗಾಗಲೇ ರದ್ದುಗೊಂಡಿದ್ದ ಐ.ಜಿ.ಪಿ. ಹುದ್ದೆಯನ್ನು ಪುನರುತ್ಥಾನಗೊಳಿಸಿ, ಸದರಿ ಹುದ್ದೆಯನ್ನು ಭರ್ತಿ ಮಾಡಲಾಗಿದೆ. ಪ್ರಸ್ತುತ, ಸದರಿ ಐ.ಜಿ.ಪಿ. (ವಿಚಕ್ಷಣಾ ದಳ) ಕೆಪಿಟಿಸಿಎಲ್ ಮತ್ತು ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು ಹುದ್ದೆಯಲ್ಲಿ ಎ.ಡಿ.ಜಿ.ಪಿ. ವೃಂದದ ಅಧಿಕಾರಿಯು ಪ್ರಭಾರೆಯಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.

ಗ್ರಾಹಕರಿಗೆ ವಿದ್ಯುತ್ ಸರಬರಾಜು ಮಾಡುವ, ವಿದ್ಯುಚ್ಛಕ್ತಿಯನ್ನು ಲೆಕ್ಕಿಸುವ, ತಾಂತ್ರಿಕ ನಷ್ಟವನ್ನು ಕಡಿಮೆ ಮಾಡುವ ಹಾಗೂ ವಿದ್ಯುತ್ ಕಳ್ಳತನ ಹಾಗೂ ಸೋರಿಕೆಯನ್ನು ತಡೆಗಟ್ಟುವ ಕಾರ್ಯವನ್ನು ಸಂಬಂಧಿಸಿದ ಎಸ್ಕಾಂಗಳು ನಿರ್ವಹಿಸುತ್ತಿದ್ದು, ವಿದ್ಯುತ್ ಸರಬರಾಜು ಕಂಪನಿಗಳ ವ್ಯವಸ್ಥಾಪಕ ನಿರ್ದೇಶಕರುಗಳು ಕಂಪನಿಯ ಒಟ್ಟಾರೆ ಕಾರ್ಯಕ್ಷಮತೆಗೆ ಜವಾಬ್ದಾರರಾಗಿರುತ್ತಾರೆ. ಹೀಗಾಗಿ ಎ.ಡಿ.ಜಿ.ಪಿ. (ವಿಚಕ್ಷಣ ದಳ), ಕೆಪಿಟಿಸಿಎಲ್ ಮತ್ತು ಎಸ್ಕಾಂಗಳು ಹುದ್ದೆಯ ಅಗತ್ಯವಿಲ್ಲವಾದ್ದರಿಂದ ಸದರಿ ಐ.ಜಿ.ಪಿ/ಎ.ಡಿ.ಜಿ.ಪಿ. (ವಿಚಕ್ಷಣಾ ದಳ), ಕೆಪಿಟಿಸಿಎಲ್ ಮತ್ತು ಎಸ್ಕಾಂಗಳು ಹುದ್ದೆಯನ್ನು ರದ್ದುಗೊಳಿಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಲಾಗಿದೆ :-

**ಸರ್ಕಾರದ ಆದೇಶ ಸಂಖ್ಯೆ : ಇಎನ್ 159 ಇಇಬಿ 2012, ಬೆಂಗಳೂರು, ದಿನಾಂಕ : 16-08-2014.**

ಕರ್ನಾಟಕ ವಿದ್ಯುತ್ ಪ್ರಸರಣಾ ನಿಗಮ ನಿಯಮಿತದಲ್ಲಿ ಸೃಜಿಸಲಾಗಿರುವ ಐ.ಜಿ.ಪಿ./ಎ.ಡಿ.ಜಿ.ಪಿ. (ವಿಚಕ್ಷಣ ದಳ), ಕೆಪಿಟಿಸಿಎಲ್ ಮತ್ತು ಎಲ್ಲಾ ಎಸ್ಕಾಂಗಳು, ಹುದ್ದೆಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

1. ಐ.ಜಿ.ಪಿ./ಎ.ಡಿ.ಜಿ.ಪಿ. (ವಿಚಕ್ಷಣ ದಳ), ಕೆಪಿಟಿಸಿಎಲ್ ಮತ್ತು ಎಲ್ಲಾ ಎಸ್ಕಾಂಗಳರವರ ಅಧೀನದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಎಲ್ಲಾ ವಿಚಕ್ಷಣಾ ದಳದ ಪೊಲೀಸ್ ಅಧೀಕ್ಷಕರು (ಜಾಗೃತ ದಳ)ಗಳು ಈ ತಕ್ಷಣದಿಂದ ಜಾರಿಗೆ ಬರುವಂತೆ ಆಯಾ ವಿದ್ಯುತ್ ಸರಬರಾಜು ಕಂಪನಿಗಳ ವ್ಯವಸ್ಥಾಪಕ ನಿರ್ದೇಶಕರುಗಳಿಗೆ ವರದಿ ಒಪ್ಪಿಸತಕ್ಕದ್ದು ಮತ್ತು ಅವರುಗಳ ಅಧೀನದಲ್ಲಿ ಕರ್ತವ್ಯ ನಿರ್ವಹಿಸತಕ್ಕದ್ದು.
2. ಹಾಲಿ ಎ.ಡಿ.ಜಿ.ಪಿ. (ವಿಚಕ್ಷಣಾ ದಳ), ಕೆಪಿಟಿಸಿಎಲ್ ಮತ್ತು ಎಸ್ಕಾಂಗಳು ಹುದ್ದೆಯಲ್ಲಿ ಪ್ರಭಾರ ವ್ಯವಸ್ಥೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿಯ ಸೇವೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಗೆ ಹಿಂದಿರುಗಿಸಲಾಗಿದೆ.

ಈವರೆಗೆ ಐ.ಜಿ.ಪಿ. (ವಿಜಿಲೆನ್ಸ್ ಮತ್ತು ಎನ್‌ಫೋರ್ಸ್‌ಮೆಂಟ್)ರವರ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಐದು ಎಸ್ಕಾಂಗಳ ವ್ಯಾಪ್ತಿಯಲ್ಲಿ ಬರುವ ಎಸ್.ಪಿ. (ವಿಜಿಲೆನ್ಸ್) ಹುದ್ದೆಗಳನ್ನು ಆಯಾ ಎಸ್ಕಾಂಗಳ ವ್ಯವಸ್ಥಾಪಕ ನಿರ್ದೇಶಕರ ಅಧೀನದಲ್ಲಿ ಕಾರ್ಯನಿರ್ವಹಿಸಲು ಅನುವಾಗುವಂತೆ ಸದರಿಯವರ ಸೇವೆಯನ್ನು ಸಂಬಂಧಪಟ್ಟ ಎಸ್ಕಾಂಗಳ ಅಧೀನಕ್ಕೆ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**PR. 692** **ಎ.ಎ. ಚಪ್ಪರಬಂದ್**

**SC-50** ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

## ಇಂಧನ ಸಚಿವಾಲಯ

**ವಿಷಯ :** ವಿದ್ಯುತ್ ಪರಿವೀಕ್ಷಣಾ ಇಲಾಖೆಯಲ್ಲಿ ಸೃಜಿಸಲಾಗಿರುವ ಅಪರ ಮುಖ್ಯ ವಿದ್ಯುತ್ ಪರಿವೀಕ್ಷಕರ ಹಾಗೂ ಲೀಗಲ್ ಆಫೀಸರ್ ಹುದ್ದೆಗಳಿಗೆ ನೇಮಕಾತಿ ಹಾಗೂ ಮುಂಬಡ್ತಿ ವಿಧಾನಗಳನ್ನು ನಿಗದಿಪಡಿಸಲು ಕಾರ್ಯಕಾರಿ ಆದೇಶವನ್ನು ಹೊರಡಿಸುವ ಬಗ್ಗೆ.

**ಓದಲಾಗಿದೆ :**
1. ಆದೇಶ ಸಂಖ್ಯೆ : ಇಎನ್ 61 ಇಬಿಎಸ್ 2010, ದಿನಾಂಕ : 25–02–2011.
2. ಆದೇಶ ಸಂಖ್ಯೆ : ಇಎನ್ 47 ಇಬಿಎಸ್ 2010, ದಿನಾಂಕ : 29–06–2012.
3. ಅಧಿಕೃತ ಜ್ಞಾಪನ ಸಂಖ್ಯೆ : ಸಿಆಸುಇ 38 ಸೇನಿಇ 96, ದಿನಾಂಕ : 01–08–1996.
4. ಆದೇಶ ಸಂಖ್ಯೆ : ಇಎನ್ 61 ಇಬಿಎಸ್ 2010 (ಭಾಗ–2), ದಿನಾಂಕ : 07–08–2013.
5. ಆದೇಶ ಸಂಖ್ಯೆ : ಇಎನ್ 151 ಇಬಿಎಸ್ 2012 (ಭಾಗ–1), ದಿನಾಂಕ : 19–07–2014.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ : 25–02–2011ರ ಸರ್ಕಾರಿ ಆದೇಶದಲ್ಲಿ ಒಂದು ಲೀಗಲ್ ಆಫೀಸರ್ ಹುದ್ದೆಯನ್ನು ಹಾಗೂ ಮೇಲಿನ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ : 29–06–2012ರ ಆದೇಶದಲ್ಲಿ ಐದು ಅಪರ ಮುಖ್ಯ ವಿದ್ಯುತ್ ಪರಿವೀಕ್ಷಕರ ಹುದ್ದೆಗಳನ್ನು ಸೃಜಿಸಲಾಯಿತು. ಲೀಗಲ್ ಆಫೀಸರ್ ಹುದ್ದೆಯನ್ನು ನಿಯೋಜನೆಯ ಮೇಲೆ ತೆಗೆದುಕೊಳ್ಳಲು ಪ್ರಸ್ತಾಪಿಸಲಾಗಿದೆ. ಅಪರ ಮುಖ್ಯ ವಿದ್ಯುತ್ ಪರಿವೀಕ್ಷಕರ ಹುದ್ದೆಗೆ ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಹುದ್ದೆಯಿಂದ ಬಡ್ತಿಯ ಮೇಲೆ ತುಂಬಲು ಪ್ರಸ್ತಾಪಿಸಲಾಗಿದೆ. ಈ ಎರಡು ಹುದ್ದೆಗಳು ಹೊಸದಾಗಿ ಸೃಜಿಸಿರುವುದರಿಂದ ವೃಂದ ಮತ್ತು ನೇಮಕಾತಿ ನಿಯಮಗಳನ್ನು ರೂಪಿಸಿರುವುದಿಲ್ಲ. ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ನೇಮಕಾತಿ ವಿಧಾನ ನಿಗದಿಪಡಿಸದೆ ಇರುವ ಹುದ್ದೆಗಳಿಗೆ ನೇಮಕಾತಿ ವಿಧಾನವನ್ನು ಒಂದು ಕಾರ್ಯಕಾರಿ ಆದೇಶದ ಮೂಲಕ ನಿಗದಿಪಡಿಸಲು ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ದಿನಾಂಕ : 01–08–1996ರ ಅಧಿಕೃತ ಜ್ಞಾಪನದಲ್ಲಿ ಕಲ್ಪಿಸಲಾಗಿದೆ. ಈ ಎರಡು ಹುದ್ದೆಗಳನ್ನು ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ಮಾಡುವ ಮೂಲಕ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಅಳವಡಿಸಿ ತುಂಬಲು ಕಾಲಾವಕಾಶ ಬೇಕಾಗಿರುವುದರಿಂದ ಈ ಹಿನ್ನೆಲೆಯಲ್ಲಿ ಮೇಲೆ ಓದಲಾದ (4)ರ ಆದೇಶದಲ್ಲಿ ಅಪರ ಮುಖ್ಯ ವಿದ್ಯುತ್ ಪರಿವೀಕ್ಷಕರು ಹಾಗೂ ಲೀಗಲ್ ಆಫೀಸರ್ ಹುದ್ದೆಗೆ ನೇಮಕಾತಿ ವಿಧಾನವನ್ನು ಕಾರ್ಯಕಾರಿ ಕಾರ್ಯ ವಿಧಾನವನ್ನು ಆದೇಶದ ಮೂಲಕ ಹೊರಡಿಸಿ, ಆರು ತಿಂಗಳ ಅವಧಿಗೆ ವಿಸ್ತರಿಸಲಾಗಿತ್ತು. ತದನಂತರ ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಆದೇಶದಲ್ಲಿ ಅಪರ ಮುಖ್ಯ ವಿದ್ಯುತ್ ಪರಿವೀಕ್ಷಕರ ಇನ್ನು ಎರಡು ಹುದ್ದೆಗಳನ್ನು ಸೃಜಿಸಲಾಗಿದೆ. ಈ ಹಿನ್ನೆಲೆಯಲ್ಲಿ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಅಂತಿಮಗೊಳಿಸಲು ಕಾಲಾವಕಾಶ ಬೇಕಿರುವುದರಿಂದ ಅಪರ ಮುಖ್ಯ ವಿದ್ಯುತ್ ಪರಿವೀಕ್ಷಕರು ಹಾಗೂ ಲೀಗಲ್ ಆಫೀಸರ್ ಹುದ್ದೆಗಳಿಗೆ ನಿಗಧಿಪಡಿಸಿರುವ ನೇಮಕಾತಿ ವಿಧಾನವನ್ನು ದಿನಾಂಕ : 01–03–2013 ರಿಂದ ಒಂದು ವರ್ಷದವರೆಗೆ ವಿಸ್ತರಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 61 ಇಬಿಎಸ್ 2010 (ಭಾಗ–2), ಬೆಂಗಳೂರು, ದಿನಾಂಕ : 13–08–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ವಿದ್ಯುತ್ ಪರಿವೀಕ್ಷಣಾ ಇಲಾಖೆಯಲ್ಲಿ ರೂ. 28100–50100 ವೇತನ ಶ್ರೇಣಿಯ ಒಂದು ಲೀಗಲ್ ಆಫೀಸರ್ ಹುದ್ದೆ ಮತ್ತು ರೂ. 44250–60600 ವೇತನ ಶ್ರೇಣಿಯ ಐದು ಅಪರ ಮುಖ್ಯ ವಿದ್ಯುತ್ ಪರಿವೀಕ್ಷಕರ ಹುದ್ದೆಗಳಿಗೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ದಿನಾಂಕ : 01–08–1996ರ ಅಧಿಕೃತ ಜ್ಞಾಪನದ ಅನ್ವಯ ಈ ಕೆಳಕಂಡ ಷರತ್ತು ಹಾಗೂ ನಿಬಂಧನೆಗಳಿಗೆ ಒಳಪಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಆದೇಶದ ಅನುಬಂಧದಲ್ಲಿ ನಮೂದಿಸಿರುವಂತೆ ನೇಮಕಾತಿ ಕಾರ್ಯ ವಿಧಾನವನ್ನು ನಿಗಧಿಪಡಿಸಿ ಅವಧಿಯನ್ನು ವಿಸ್ತರಿಸಲಾಗಿದೆ.

1. ಈ ಕಾರ್ಯಕಾರಿ ಆದೇಶದ ಮೂಲಕ ನಿಗಧಿಪಡಿಸಿದ ನೇಮಕಾತಿ ವಿಧಾನವು ಈಗಾಗಲೇ ಹೊರಡಿಸಿರುವ ಕಾರ್ಯಕಾರಿ ಆದೇಶದ ಅವಧಿಯು ಕೊನೆಗೊಳ್ಳುವ ದಿನಾಂಕದಿಂದ ಅಂದರೆ ದಿನಾಂಕ : 01-03-2014 ರಿಂದ ಒಂದು ವರ್ಷದವರೆಗೆ ಅಂದರೆ 28-02-2015 ರವರೆಗೆ ಮಾತ್ರ ಜಾರಿಯಲ್ಲಿರುತ್ತದೆ.
2. ಈ ಅವಧಿ ಒಳಗಾಗಿ ಈ ನೇಮಕಾತಿ ಕಾರ್ಯ ವಿಧಾನವನ್ನು ವಿದ್ಯುತ್ ಪರಿವೀಕ್ಷಣಾ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ಮಾಡಿ ಅಳವಡಿಸತಕ್ಕದ್ದು.
3. ಈ ಅವಧಿಯ ನಂತರ ಈ ಕಾರ್ಯಕಾರಿ ಆದೇಶವು ತನ್ನಿಂದ ತಾನೇ ರದ್ದಾಗುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಮೀರ್ ಮಡಿಮನ್**

ಪೀಠಾಧಿಕಾರಿ,

ಇಂಧನ ಇಲಾಖೆ.

## ಅನುಬಂಧ

**ಸರ್ಕಾರದ ಆದೇಶ ಸಂಖ್ಯೆ : ಇಎನ್ 61 ಇಬಿಎಸ್ 2010 (ಭಾಗ-2) ದಿನಾಂಕ : 13-08-2014**

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ ಮತ್ತು ವೇತನ | ಹುದ್ದೆಗಳ ಸಂಖ್ಯೆ | ನೇಮಕಾತಿ ವಿಧಾನ | ಕನಿಷ್ಠ ಅರ್ಹತೆ |
|---|---|---|---|---|
| 1. | ಅಪರ ಮುಖ್ಯ ವಿದ್ಯುತ್ ಪರಿವೀಕ್ಷಕರು, ರೂ. 44250-60600 | 5 | ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಹುದ್ದೆಯಿಂದ ಬಡ್ತಿ | ಬಡ್ತಿ ಹೊಂದಲು ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಹುದ್ದೆಯಲ್ಲಿ ಕನಿಷ್ಠ 3 ವರ್ಷಗಳ ಸೇವೆಯನ್ನು ಸಲ್ಲಿಸಿರಬೇಕು |
| 2. | ಲೀಗಲ್ ಆಫೀಸರ್ ರೂ. 28100-50100 | 1 | ಹಿರಿಯ ಸಹಾಯಕ ಅಭಿಯೋಜಕರ ಹುದ್ದೆಯಿಂದ ಅಭಿಯೋಗ ಮತ್ತು ಸರ್ಕಾರದ ವ್ಯಾಜ್ಯಗಳ ಇಲಾಖೆಯಿಂದ ನಿಯೋಜನೆ | ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕ ಹುದ್ದೆಯಲ್ಲಿ ಕನಿಷ್ಠ ಒಂದು ವರ್ಷ ಸೇವೆ ಸಲ್ಲಿಸಿರಬೇಕು. |

**ಸಮೀರ್ ಮಡಿಮನ್**

ಪೀಠಾಧಿಕಾರಿ,

ಇಂಧನ ಇಲಾಖೆ.

**PR. 693**
**SC-50**

## ಇಂಧನ ಸಚಿವಾಲಯ

**ವಿಷಯ :** ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗಕ್ಕೆ 2014-15ರ ಹಣಕಾಸು ವರ್ಷದಲ್ಲಿ ಮೊದಲ ಮೂರು ತಿಂಗಳ ಅವಧಿಗೆ ಸಹಾಯಾನುದಾನದ ಹಣ ಬಿಡುಗಡೆ ಬಗ್ಗೆ.

**ಓದಲಾಗಿದೆ :** ಕವಿನಿ ಆಯೋಗದ ಪತ್ರ ಸಂಖ್ಯೆ : ನಂ ಎಫ್/14/ಎಜಿ/99, ದಿನಾಂಕ : 21-04-2014.

**ಪ್ರಸ್ತಾವನೆ :**

1. 2014-15ನೇ ಸಾಲಿನ ಆಯವ್ಯಯದಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಸಹಾಯಾನುದಾನ ಒದಗಿಸುವ ಸಲುವಾಗಿ ರೂ. 300.00 ಲಕ್ಷಗಳ ಅನುದಾನವನ್ನು ನಿಗಧಿಪಡಿಸಲಾಗಿದೆ. ಈ ಸಹಾಯಾನುದಾನವನ್ನು ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 03 ಟಿಎಫ್‌ಪಿ 2014, ದಿನಾಂಕ : 04-04-2014ರಲ್ಲಿ ಆಡಳಿತ ಇಲಾಖೆಗೆ ನೀಡಿರುವ ಅಧಿಕಾರದನ್ವಯ ನಾಲ್ಕು ಕಂತುಗಳಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಲು ಉದ್ದೇಶಿಸಲಾಗಿದೆ.
2. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚಗಳ ಸಲುವಾಗಿ 2014-15ನೇ ಸಾಲಿಗೆ ಆಯವ್ಯಯದಲ್ಲಿ ಒದಗಿಸಿರುವ ಅನುದಾನದಲ್ಲಿ ಮೊದಲು ಮೂರು ತಿಂಗಳ ಅವಧಿಗೆ ಸಹಾಯಾನುದಾನ ರೂ. 75.00 ಲಕ್ಷಗಳನ್ನು ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣಾ ಆಯೋಗಕ್ಕೆ ಬಿಡುಗಡೆ ಮಾಡುವಂತೆ ಮೇಲೆ ಓದಲಾದ ಪತ್ರದಲ್ಲಿ ಕಾರ್ಯದರ್ಶಿ, ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗದವರು ಕೋರಿರುತ್ತಾರೆ. ಪ್ರಸ್ತಾವನೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 19 ಪಿಎಸ್‌ಆರ್ 2014, ಬೆಂಗಳೂರು, ದಿನಾಂಕ : 02-06-2014.**

1. ಸರ್ಕಾರವು, 2014-15ನೇ ಹಣಕಾಸು ವರ್ಷದಲ್ಲಿ ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗದ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚಗಳ ಸಲುವಾಗಿ ಲೆಕ್ಕ ಶೀರ್ಷಿಕೆ "2801-80-101-1-07-101 ಸಹಾಯಾನುದಾನ (ಯೋಜನೇತರ)" ಯಡಿ ಒದಗಿಸಿರುವ ಅನುದಾನದಲ್ಲಿ

ಮೊದಲ ಕಂತಿನ ರೂ. 75.00 ಲಕ್ಷಗಳನ್ನು (ಎಪ್ಪತ್ತೈದು ಲಕ್ಷ ರೂ.ಗಳು ಮಾತ್ರ) ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಿ ಆದೇಶಿಸಿದೆ.

2. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜುವನ್ನು "Payees Receipt" ನಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

3. ಆರ್ಥಿಕ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 03 ಟಿಎಫ್‌ಪಿ 2014, ದಿನಾಂಕ : 04–04–2014ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಈ ಆದೇಶವನ್ನು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**PR. 694**

## ಇಂಧನ ಸಚಿವಾಲಯ

**ವಿಷಯ :** ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿ ವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನ ಬಿಡುಗಡೆ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ : ಇಎನ್ 145 ಪಿಎಸ್‌ಆರ್ 2004, ದಿನಾಂಕ : 15–03–2005.
2. ಸರ್ಕಾರಿ ಆದೇಶ ಸಂಖ್ಯೆ : ಇಎನ್ 55 ಪಿಎಸ್‌ಆರ್ 2008, ದಿನಾಂಕ : 04–09–2008.
3. ಸರ್ಕಾರಿ ಆದೇಶ ಸಂಖ್ಯೆ : ಇಎನ್ 17 ಪಿಎಸ್‌ಆರ್ 2014, ದಿನಾಂಕ : 04–04–2014, 19–04–2014 ಮತ್ತು 05–05–2014.

**ಪ್ರಸ್ತಾವನೆ :**

1. ಮೇಲಿನ ಕ್ರಮಾಂಕ–1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ "ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರ ಒಂದಕ್ಕೆ ಪ್ರತಿ ತಿಂಗಳು 18 ಯೂನಿಟ್‌ವರೆಗೆ ಮಾತ್ರ ಉಚಿತ ವಿದ್ಯುತ್ ಒದಗಿಸಲು (ನಿಗದಿಪಡಿಸಿದ ನಿಬಂಧನೆ ಮತ್ತು ಷರತ್ತಿಗೆ ಒಳಪಟ್ಟು) ಅನುಮೋದನೆ ನೀಡಲಾಗಿರುತ್ತದೆ.

2. ಮೇಲಿನ ಕ್ರಮಾಂಕ–2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಗೊತ್ತುಪಡಿಸಲಾದ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು ದಿನಾಂಕ: 01–08–2008ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರೈತರ 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕೆ ಸಂಬಂಧಿಸಿದಂತೆ ವಿದ್ಯುತ್ ಸರಬರಾಜು ಕಂಪನಿಗಳ ಬೇಡಿಕೆಯ ಮೊಬಲಗು ಸರ್ಕಾರದಿಂದ ಮರುಪಾವತಿಸುವುದಕ್ಕೆ ಅನುಮೋದನೆ ನೀಡಲಾಗಿರುತ್ತದೆ.

3. ವಿದ್ಯುತ್ ಸರಬರಾಜು ಕಂಪನಿಗಳು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ 2014–15ನೇ ಸಾಲಿನ ಆಯವ್ಯಯ ಸವಿವರ ವೆಚ್ಚದ ಅಂದಾಜುಗಳು ಸಂಪುಟ–7ರ ಪುಟ ಸಂಖ್ಯೆ–77ರಲ್ಲಿ ಲೆಕ್ಕಶೀರ್ಷಿಕೆ "2801–80–101–1–04–106 ಸಹಾಯಧನ (ಯೋಜನೇತರ)"ದ ಅಡಿಯಲ್ಲಿ ರೂ. 6200.00 ಕೋಟಿಗಳನ್ನು ಒದಗಿಸಲಾಗಿದೆ. ರೂ. 800.00 ಕೋಟಿಗಳನ್ನು ಈಗಾಗಲೇ ಮೇಲಿನ ಕ್ರಮಾಂಕ 3ರಲ್ಲಿ ಓದಲಾದ ಆದೇಶಗಳಲ್ಲಿ ಬಿಡುಗಡೆ ಮಾಡಿದೆ.

4. 2014–15ನೇ ಸಾಲಿನ ಜೂನ್ 2014ರ ಮಾಹೆಗೆ ರೂ. 400.00 ಕೋಟಿಗಳ ಸಹಾಯಧನವನ್ನು ಬಿಡುಗಡೆ ಮಾಡಲು ಪ್ರಸ್ತುತ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 17 ಪಿಎಸ್‌ಆರ್ 2014, ಬೆಂಗಳೂರು, ದಿನಾಂಕ : 02–06–2014.**

1. ವಿದ್ಯುತ್ ಸರಬರಾಜು ಕಂಪನಿಗಳು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುತ್ತಿರುವುದಕ್ಕಾಗಿ ಸರ್ಕಾರವು ಜೂನ್–2014ರ ಮಾಹೆಗೆ ರೂ. 400.00 ಕೋಟಿಗಳ (ನಾಲ್ಕು ನೂರು ಕೋಟಿ ರೂಪಾಯಿಗಳು ಮಾತ್ರ) ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಲೆಕ್ಕಶೀರ್ಷಿಕೆ "2801–80–101–1–04–106 (ಸಹಾಯಧನ) (ಯೋಜನೇತರ) ಅಡಿಯಲ್ಲಿ ಈ ಕೆಳಕಂಡಂತೆ ಬಿಡುಗಡೆಗೊಳಿಸಿ ಆದೇಶಿಸಿದೆ.

(ರೂ. ಕೋಟಿಗಳಲ್ಲಿ)

| ವಿದ್ಯುತ್ ಸರಬರಾಜು ಕಂಪನಿಗಳು | 10 ಹೆಚ್‌ಪಿ ವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ | ಭಾಗ್ಯಜ್ಯೋತಿ/ಕುಟೀರ ಜ್ಯೋತಿ ಸ್ಥಾವರಗಳಿಗೆ | 2014–15ರ ಜೂನ್ ಮಾಹೆಗೆ ಬಿಡುಗಡೆ |
|---|---|---|---|
| ಬೆವಿಕಂ | 61.00 | 1.00 | 62.00 |
| ಮವಿಕಂ | 29.00 | 1.00 | 30.00 |

| | | | |
|---|---|---|---|
| ಹುವಿಕಂ | 154.00 | 6.00 | 160.00 |
| ಗುವಿಕಂ | 73.00 | 4.00 | 77.00 |
| ಚಾವಿಸನಿನಿ | 62.00 | 3.00 | 65.00 |
| ಹುಕ್ಕೇರಿ | 6.00 | 0.00 | 6.00 |
| **ಒಟ್ಟು** | **385.00** | **15.00** | **400.00** |

ಮೇಲಿನ ಕೊಷ್ಟಕದಲ್ಲಿರುವಂತೆ ಜೂನ್ 2014ರ ಮಾಹೆಗೆ ಬಿಡುಗಡೆ ಮಾಡಿ ಆದೇಶಿಸಿರುವ ರೂ. 400.00 ಕೋಟಿಗಳನ್ನು ಈ ಕೆಳಕಂಡಂತೆ ಮರುಹಂಚಿಕೆ ಮಾಡಿದೆ.

| ವಿದ್ಯುತ್ ಸರಬರಾಜು ಕಂಪನಿಗಳು | ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ನೇರ ಬಿಡುಗಡೆ | ವಿದ್ಯುತ್ ಸರಬರಾಜು ಕಂಪನಿಗಳಿಗೆ ನೇರ ಬಿಡುಗಡೆ | ಒಟ್ಟು ಮೊತ್ತ |
|---|---|---|---|
| ಬೆವಿಕಂ | 62.00 | 0.00 | 62.00 |
| ಮವಿಕಂ | 30.00 | 0.00 | 30.00 |
| ಹುವಿಕಂ | 103.00 | 63.00 | 166.00 |
| ಗುವಿಕಂ | 50.00 | 27.00 | 77.00 |
| ಚಾವಿಸನಿನಿ | 35.00 | 30.00 | 65.00 |
| **ಒಟ್ಟು** | **280.00** | **120.00** | **400.00** |

2. ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ಬಿಡುಗಡೆ ಮಾಡಿರುವ ರೂ. 63.00 ಕೋಟಿಗಳಲ್ಲಿ ಹುಕ್ಕೇರಿ ಗ್ರಾಮೀಣ ವಿದ್ಯುತ್ ಸಹಕಾರ ಸಂಘದ ಬಾಬ್ತು ಸಹಾಯಧನ ರೂ. 6.00 ಕೋಟಿಗಳೆಂದು ಲೆಕ್ಕೀಕರಿಸುವುದು.

3. ಮೇಲಿನ ಎಲ್ಲಾ ಹೊಂದಾಣಿಕೆಗಳನ್ನು ಪರಿಗಣಿಸಿ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ರೂ. 280.00 ಕೋಟಿಗಳನ್ನು, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ರೂ. 63.00 ಕೋಟಿಗಳು, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿಗೆ ರೂ. 27.00 ಕೋಟಿಗಳು ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಕ್ಕೆ ರೂ. 30.00 ಕೋಟಿಗಳನ್ನು ನೇರ ಬಿಡುಗಡೆ ಮಾಡಿ ಆದೇಶಿಸಿದೆ.

4. ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಗಳು ಹಣ ಸ್ವೀಕೃತಿ ರಸೀದಿಯ ಮೇಲೆ ಸರ್ಕಾರದ ಉಪಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜು ಪಡೆದು ಹಣ ಪಡೆಯತಕ್ಕದ್ದು. ಈ ಆದೇಶದ ಪ್ರಕಾರ ಹಣ ಸ್ವೀಕೃತಿ ಮಾಡುವ ಸಂಸ್ಥೆಗಳು ಮೂರು ದಿನಗಳೊಳಗೆ ಅನುಸರಣ ವರದಿ ಮತ್ತು ಬಳಕೆಯ ಪ್ರಮಾಣ ಪತ್ರ (Utilization Certificate) ಸಲ್ಲಿಸತಕ್ಕದ್ದು.

5. ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿದ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳ ವಿದ್ಯುತ್ ಖರೀದಿ–ಅಸಲು ಬಾಕಿಗೆ ಲೆಕ್ಕೀಕರಿಸುವುದು.

6. ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು, ತಮ್ಮ ವಿದ್ಯುತ್ ಖರೀದಿ ಬಾಕಿಗಳನ್ನು ಪಾವತಿಸಲು ನಿಯತಕ್ರಿಯಾ ಯೋಜನೆಯೊಂದನ್ನು ಹೊಂದಿರತಕ್ಕದ್ದು ಹಾಗೂ ವಿದ್ಯುತ್ ಖರೀದಿ ಬಾಕಿಯನ್ನು ವಿದ್ಯುತ್ ಸರಬರಾಜು ಕಂಪನಿಗಳ ಸ್ವಂತ ಸಂಪನ್ಮೂಲಗಳಿಂದ ಪಾವತಿಸತಕ್ಕದ್ದು.

7. 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ಟುಗಳಿಗೆ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರಗಳಿಗೆ ಸಂಬಂಧಿಸಿದ ಎಲ್ಲಾ ಬೇಡಿಕೆಗಳ ಬಗ್ಗೆ ಮಹಾ ಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

8. ಈ ಆದೇಶವನ್ನು ಆರ್ಥಿಕ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 03 ಟಿಎಫ್‌ಪಿ 2014, ದಿನಾಂಕ : 04–04–2014ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಿದೆ.

**PR. 695**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

## ಇಂಧನ ಸಚಿವಾಲಯ

**ವಿಷಯ :** 2014–15ನೇ ಸಾಲಿನಲ್ಲಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತದಲ್ಲಿ ಸರ್ಕಾರದ ಬಂಡವಾಳ ಹೂಡಿಕೆಗೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. 2014-15ನೇ ಸಾಲಿನ ಆಯವ್ಯಯ
2. ಸರ್ಕಾರಿ ಆದೇಶ ಸಂಖ್ಯೆ : ಇಎನ್ 56 ಪಿಎಸ್ಆರ್ 2014, ದಿನಾಂಕ : 12-06-2014.
3. ಸರ್ಕಾರಿ ಆದೇಶ ಸಂಖ್ಯೆ : ಇಎನ್ 56 ಪಿಎಸ್ಆರ್ 2014/ಪಿ1, ದಿನಾಂಕ : 19-06-2014.
4. ಕವಿನಿನಿ ಪತ್ರ ಸಂಖ್ಯೆ : ಎ1 ಎಫ್3 ಬಿ2, ದಿನಾಂಕ : 04-08-2041.

**ಪ್ರಸ್ತಾವನೆ :**

1. ಮೇಲಿನ ಕ್ರ.ಸಂ.-1ರಲ್ಲಿ ಓದಲಾದ 2014-15ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ 4801-01-190-0-09-211(ಯೋಜನೆ)ಯಡಿ ವಿದ್ಯುಚ್ಛಕ್ತಿ ಬಳಕೆಯಲ್ಲಿ-ಬಂಡವಾಳ ಹೂಡಿಕೆಗಾಗಿ ರೂ. 420.22 ಕೋಟಿಗಳನ್ನು, ಲೆಕ್ಕಶೀರ್ಷಿಕೆ 4801-01-190-0-09-422(ಯೋಜನೆ) ವಿದ್ಯುಚ್ಛಕ್ತಿ ಬಳಕೆಯಲ್ಲಿ ಬಂಡವಾಳ ಹೂಡಿಕೆ-ಪರಿಶಿಷ್ಟ ಜಾತಿ ಉಪಯೋಜನೆಗಾಗಿ ರೂ. 128.65 ಕೋಟಿಗಳು ಮತ್ತು ಲೆಕ್ಕಶೀರ್ಷಿಕೆ 4801-01-190-0-09-423 (ಯೋಜನೆ) ವಿದ್ಯುಚ್ಛಕ್ತಿ ಬಳಕೆಯಲ್ಲಿ ಬಂಡವಾಳ ಹೂಡಿಕೆ-ಗಿರಿಜನ ಉಪಯೋಜನೆಗಾಗಿ ರೂ. 52.15 ಕೋಟಿಗಳನ್ನೊಳಗೊಂಡಂತೆ ಇಂಧನ ವಲಯದಲ್ಲಿ ಸರ್ಕಾರದ ಬಂಡವಾಳ ಹೂಡಿಕೆಗಾಗಿ ಒಟ್ಟಾರೆ ರೂ. 601.02 ಕೋಟಿಗಳನ್ನು ಒದಗಿಸಲಾಗಿದೆ.

2. ಮೇಲಿನ ಕ್ರ.ಸಂ.-2ರಲ್ಲಿ ಓದಲಾದ ಆದೇಶದ ಪ್ರಕಾರ ಕರ್ನಾಟಕ ಆರ್ಥಿಕ ಸಂಹಿತೆ 1957ರ ಕಲಂ 1-Aರಲ್ಲಿ ಪ್ರದತ್ತವಾದ ಅಧಿಕಾರದಂತೆ ಆರ್ಥಿಕ ಇಲಾಖೆಯು ಕರ್ನಾಟಕ ಆರ್ಥಿಕ ಸಂಹಿತೆ 1957ರ ಕಲಂ 17(ಸಿ)(4)ರ ಪ್ರಕಾರ ಸರ್ಕಾರದ ಬಂಡವಾಳ ಹೂಡಿಕೆಯ ಸಂಬಂಧ ರಾಜ್ಯ ಹುಜೂರು ಖಜಾನೆಯಿಂದ ಹಣ ಬಿಡುಗಡೆಯ ಕುರಿತು ಮಹಾಲೇಖಪಾಲರಿಂದ ಅಧಿಕಾರ ಪತ್ರ ಹೊರಡಿಸುವ ಷರತ್ತಿನಿಂದ ವಿನಾಯಿತಿ ನೀಡಿದೆ.

3. ಆರ್ಥಿಕ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 03 ಟಿಎಫ್‌ಪಿ 2014, ಬೆಂಗಳೂರು, ದಿನಾಂಕ : 04-04-2014ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದ ಪ್ರಕಾರ 2014-15ನೇ ಸಾಲಿನ ಮೊದಲ ಮೂರು ತಿಂಗಳಿಗೆ ರೂ. 150.00 ಕೋಟಿಗಳನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಸರ್ಕಾರಿ ಆದೇಶದಲ್ಲಿ ಬಿಡುಗಡೆ ಮಾಡಲಾಗಿದೆ.

4. ಆರ್ಥಿಕ ಇಲಾಖೆಯ ಅಧಿಕೃತ ಜ್ಞಾಪನ ಪತ್ರ ಸಂಖ್ಯೆ : ಸಂ. ಆಇ 07 ಬಿಪಿಇ 2014, ಬೆಂಗಳೂರು ದಿನಾಂಕ : 31-07-2014ರಲ್ಲಿ ದಿನಾಂಕ : 1ನೇ ಏಪ್ರಿಲ್ 2014ರಿಂದ 31ನೇ ಮಾರ್ಚ್ 2015ರವರೆಗಿನ ಅವಧಿಯಲ್ಲಿ ಪೂರ್ಣ ವರ್ಷಕ್ಕೆ ಆಯವ್ಯಯವನ್ನು ಅನುಮೋದಿಸಲಾಗಿದೆ ಎಂದು ತಿಳಿಸಲಾಗಿದೆ.

5. ಮೇಲೆ ಓದಲಾದ ಕ್ರಮ ಸಂಖ್ಯೆ 4ರಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ನಿಗಮ ನಿಯಮಿತರವರು ರೂ. 100.00 ಕೋಟಿಗಳಷ್ಟು ಈಕ್ವಿಟಿ ಹಣ ಬಿಡುಗಡೆ ಮಾಡಲು ಕೋರಿರುತ್ತಾರೆ. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ನಿಗಮ ನಿಯಮಿತರವರ ಕೋರಿಕೆಯನ್ನು ಪರಿಶೀಲಿಸಿ ರೂ. 60.00 ಕೋಟಿಗಳ ಬಂಡವಾಳವನ್ನು ಆಗಸ್ಟ್ 2014ರ ಮಾಹೆಯಲ್ಲಿ ಬಿಡುಗಡೆ ಮಾಡಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 56 ಪಿಎಸ್ಆರ್ 2014/ಪಿ1, ಬೆಂಗಳೂರು, ದಿನಾಂಕ : 13-08-2014.**

2014-15ನೇ ಸಾಲಿಗೆ ವಿದ್ಯುತ್ ವಲಯದಲ್ಲಿ ಸರ್ಕಾರದ ಬಂಡವಾಳ ಹೂಡಿಕೆಗಾಗಿ ಲೆಕ್ಕಶೀರ್ಷಿಕೆ "4801-01-190-0-09-211 Investment in Power Utilities (ಯೋಜನೆ)" ಯಡಿ ಸರ್ಕಾರವು ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ರೂ. 60.00 ಕೋಟಿಗಳನ್ನು (ರೂ. ಅರವತ್ತು ಕೋಟಿಗಳು ಮಾತ್ರ) ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಿ ಆದೇಶಿಸಿದೆ.

1. ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಸರ್ಕಾರದ ಉಪಕಾರ್ಯದರ್ಶಿ, ಇಂಧನ ಇಲಾಖೆರವರ ಮೇಲು ರುಜುವನ್ನು ಹಣ ಸ್ವೀಕೃತಿ ರಸೀದಿ (payee's receipts) ಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.
2. ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿರುವ ಮೊಬಲಗನ್ನು ಬಂಡವಾಳ (Equity) ವಾಗಿ ಬಳಸಿಕೊಂಡು, ಈ ಬಗ್ಗೆ ದೃಢೀಕರಣ (Utilization Certificate) ಹಾಗೂ ಅನುಸರಣಾ ವರದಿಯನ್ನು ಸರ್ಕಾರಕ್ಕೆ ಒದಗಿಸತಕ್ಕದ್ದು.
3. ವಿದ್ಯುಚ್ಛಕ್ತಿ ಯೋಜನೆಗಳ ಮೇಲಣ ಬಂಡವಾಳ ಹೂಡಿಕೆಯನ್ನು ಮಹಾ ಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು ಹಾಗೂ ಮಹಾಲೇಖಪಾಲರವರಿಂದ ಪಡೆದುಕೊಳ್ಳಬೇಕಾಗಿರುವ ಸಹಮತಿಗೆ ವಿನಾಯಿತಿಯನ್ನು ಇಂಧನ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ : ಇಎನ್ 56 ಪಿಎಸ್ಆರ್ 2014, ದಿನಾಂಕ ; 12-06-2014ರಲ್ಲಿ ನೀಡಿದೆ.
4. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 03 ಟಿಎಫ್‌ಪಿ 2014, ದಿನಾಂಕ : 04-04-2014ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**PR. 696**

## ಇಂಧನ ಸಚಿವಾಲಯ

**ವಿಷಯ :** ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿ ವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನ ಬಿಡುಗಡೆ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ಇಎನ್ 145 ಪಿಎಸ್‌ಆರ್ 2004, ದಿನಾಂಕ : 15–03–2005.

2. ಸರ್ಕಾರಿ ಆದೇಶ ಸಂಖ್ಯೆ : ಇಎನ್ 55 ಪಿಎಸ್‌ಆರ್ 2008, ದಿನಾಂಕ : 04–09–2008.

3. ಸರ್ಕಾರಿ ಆದೇಶ ಸಂಖ್ಯೆ : ಇಎನ್ 17 ಪಿಎಸ್‌ಆರ್ 2014, ದಿನಾಂಕ : 04–04–2014, 19–04–2014, 05–05–2014, 02–06–2014 ಮತ್ತು 01–07–2014.

**ಪ್ರಸ್ತಾವನೆ :**

1. ಮೇಲಿನ ಕ್ರಮಾಂಕ–1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ "ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರ ಒಂದಕ್ಕೆ ಪ್ರತಿ ತಿಂಗಳು 18 ಯೂನಿಟ್‌ವರೆಗೆ ಮಾತ್ರ ಉಚಿತ ವಿದ್ಯುತ್ ಒದಗಿಸಲು (ನಿಗದಿಪಡಿಸಿದ ನಿಬಂಧನೆ ಮತ್ತು ಷರತ್ತಿಗೆ ಒಳಪಟ್ಟು) ಅನುಮೋದನೆ ನೀಡಲಾಗಿರುತ್ತದೆ.

2. ಮೇಲಿನ ಕ್ರಮಾಂಕ–2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಗೊತ್ತುಪಡಿಸಲಾದ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು ದಿನಾಂಕ: 01–08–2008ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರೈತರ 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕೆ ಸಂಬಂಧಿಸಿದಂತೆ ವಿದ್ಯುತ್ ಸರಬರಾಜು ಕಂಪನಿಗಳ ಬೇಡಿಕೆಯ ಮೊಬಲಗು ಸರ್ಕಾರದಿಂದ ಮರುಪಾವತಿಸುವುದಕ್ಕೆ ಅನುಮೋದನೆ ನೀಡಲಾಗಿರುತ್ತದೆ.

3. ವಿದ್ಯುತ್ ಸರಬರಾಜು ಕಂಪನಿಗಳು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ 2014–15ನೇ ಸಾಲಿನ ಆಯವ್ಯಯ ಸವಿವರ ವೆಚ್ಚದ ಅಂದಾಜುಗಳು ಸಂಪುಟ–7ರ ಪುಟ ಸಂಖ್ಯೆ–77ರಲ್ಲಿ ಲೆಕ್ಕಶೀರ್ಷಿಕೆ "2801–80–101–1–04–106 ಸಹಾಯಧನ (ಯೋಜನೇತರ)"ದ ಅಡಿಯಲ್ಲಿ ರೂ. 6200.00 ಕೋಟಿಗಳನ್ನು ಒದಗಿಸಲಾಗಿದೆ. ರೂ. 1600.00 ಕೋಟಿಗಳನ್ನು ಈಗಾಗಲೇ ಮೇಲಿನ ಕ್ರಮಾಂಕ 3ರಲ್ಲಿ ಓದಲಾದ ಆದೇಶಗಳಲ್ಲಿ ಬಿಡುಗಡೆ ಮಾಡಿದೆ.

4. 2014–15ನೇ ಸಾಲಿನ ಆಗಸ್ಟ್ 2014ರ ಮಾಹೆಗೆ ರೂ. 400.00 ಕೋಟಿಗಳ ಸಹಾಯಧನವನ್ನು ಬಿಡುಗಡೆ ಮಾಡಲು ಪ್ರಸ್ತುತ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 17 ಪಿಎಸ್‌ಆರ್ 2014, ಬೆಂಗಳೂರು, ದಿನಾಂಕ : 02–08–2014.**

1. ವಿದ್ಯುತ್ ಸರಬರಾಜು ಕಂಪನಿಗಳು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುತ್ತಿರುವುದಕ್ಕಾಗಿ ಸರ್ಕಾರವು ಆಗಸ್ಟ್–2014ರ ಮಾಹೆಗೆ ರೂ. 400.00 ಕೋಟಿಗಳ (ನಾಲ್ಕು ನೂರು ಕೋಟಿ ರೂಪಾಯಿಗಳು ಮಾತ್ರ) ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಲೆಕ್ಕಶೀರ್ಷಿಕೆ "2801–80–101–1–04–106 (ಸಹಾಯಧನ) (ಯೋಜನೇತರ) ಅಡಿಯಲ್ಲಿ ಈ ಕೆಳಕಂಡಂತೆ ಬಿಡುಗಡೆಗೊಳಿಸಿ ಆದೇಶಿಸಿದೆ.

(ರೂ. ಕೋಟಿಗಳಲ್ಲಿ)

| ವಿದ್ಯುತ್ ಸರಬರಾಜು | 10 ಹೆಚ್‌ಪಿ ವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ | ಭಾಗ್ಯಜ್ಯೋತಿ/ಕುಟೀರ ಜ್ಯೋತಿ | 2014–15ರ ಆಗಸ್ಟ್ ಮಾಹೆಗೆ ಬಿಡುಗಡೆ |
|---|---|---|---|
| ಬೆವಿಕಂ | 44.00 | 2.00 | 46.00 |
| ಮವಿಕಂ | 26.00 | 0.00 | 26.00 |
| ಹುವಿಕಂ | 163.00 | 0.00 | 163.00 |
| ಗುವಿಕಂ | 86.00 | 4.00 | 90.00 |
| ಚಾವಿಸನಿನಿ | 72.00 | 0.00 | 72.00 |
| ಹುಕ್ಕೇರಿ | 3.00 | 0.00 | 3.00 |
| **ಒಟ್ಟು** | **394.00** | **6.00** | **400.00** |

ಮೇಲಿನ ಕೋಷ್ಠಕದಲ್ಲಿರುವಂತೆ ಆಗಸ್ಟ್ 2014ರ ಮಾಹೆಗೆ ಬಿಡುಗಡೆ ಮಾಡಿ ಆದೇಶಿಸಿರುವ ರೂ. 400.00 ಕೋಟಿಗಳನ್ನು ಈ ಕೆಳಕಂಡಂತೆ ಮರುಹಂಚಿಕೆ ಮಾಡಿದೆ.

| ವಿದ್ಯುತ್ ಸರಬರಾಜು ಕಂಪನಿಗಳು | ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ನೇರ ಬಿಡುಗಡೆ | ವಿದ್ಯುತ್ ಸರಬರಾಜು ಕಂಪನಿಗಳಿಗೆ ನೇರ ಬಿಡುಗಡೆ | ಒಟ್ಟು ಮೊತ್ತ |
|---|---|---|---|
| ಬೆವಿಕಂ | 46.00 | 0.00 | 46.00 |
| ಮವಿಕಂ | 26.00 | 0.00 | 26.00 |
| ಹುವಿಕಂ | 106.00 | 60.00 | 166.00 |

| ವಿದ್ಯುತ್ ಸರಬರಾಜು ಕಂಪನಿಗಳು | ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ನೇರ ಬಿಡುಗಡೆ | ವಿದ್ಯುತ್ ಸರಬರಾಜು ಕಂಪನಿಗಳಿಗೆ ನೇರ ಬಿಡುಗಡೆ | ಒಟ್ಟು ಮೊತ್ತ |
|---|---|---|---|
| ಗುವಿಕಂ | 70.00 | 20.00 | 90.00 |
| ಚಾವಿಸನಿನಿ | 52.00 | 20.00 | 72.00 |
| **ಒಟ್ಟು** | **300.00** | **100.00** | **400.00** |

2. ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ಬಿಡುಗಡೆ ಮಾಡಿರುವ ರೂ. 60.00 ಕೋಟಿಗಳಲ್ಲಿ ಹುಕ್ಕೇರಿ ಗ್ರಾಮೀಣ ವಿದ್ಯುತ್ ಸಹಕಾರ ಸಂಘದ ಬಾಬ್ತು ಸಹಾಯಧನ ರೂ. 3.00 ಕೋಟಿಗಳೆಂದು ಲೆಕ್ಕೀಕರಿಸುವುದು.

3. ಮೇಲಿನ ಎಲ್ಲಾ ಹೊಂದಾಣಿಕೆಗಳನ್ನು ಪರಿಗಣಿಸಿ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ರೂ. 300.00 ಕೋಟಿಗಳು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ರೂ. 60.00 ಕೋಟಿಗಳು, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿಗೆ ರೂ. 20.00 ಕೋಟಿಗಳು ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಕ್ಕೆ ರೂ. 20.00 ಕೋಟಿಗಳನ್ನು ನೇರ ಬಿಡುಗಡೆ ಮಾಡಿ ಆದೇಶಿಸಿದೆ.

4. ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಗಳು ಹಣ ಸ್ವೀಕೃತಿ ರಸೀದಿಯ ಮೇಲೆ ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜು ಪಡೆದು ಹಣ ಪಡೆಯತಕ್ಕದ್ದು. ಈ ಆದೇಶದ ಪ್ರಕಾರ ಹಣ ಸ್ವೀಕೃತಿ ಮಾಡುವ ಸಂಸ್ಥೆಗಳು ಮೂರು ದಿನಗಳೊಳಗೆ ಅನುಸರಣ ವರದಿ ಮತ್ತು ಬಳಕೆಯ ಪ್ರಮಾಣ ಪತ್ರ (Utilization Certificate) ಸಲ್ಲಿಸತಕ್ಕದ್ದು.

5. ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿದ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳ ವಿದ್ಯುತ್ ಖರೀದಿ–ಅಸಲು ಬಾಕಿಗೆ ಲೆಕ್ಕೀಕರಿಸುವುದು.

6. ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು, ತಮ್ಮ ವಿದ್ಯುತ್ ಖರೀದಿ ಬಾಕಿಗಳನ್ನು ಪಾವತಿಸಲು ನಿಯತಕ್ರಿಯಾ ಯೋಜನೆಯೊಂದನ್ನು ಹೊಂದಿರತಕ್ಕದ್ದು ಹಾಗೂ ವಿದ್ಯುತ್ ಖರೀದಿ ಬಾಕಿಯನ್ನು ವಿದ್ಯುತ್ ಸರಬರಾಜು ಕಂಪನಿಗಳ ಸ್ವಂತ ಸಂಪನ್ಮೂಲಗಳಿಂದ ಪಾವತಿಸತಕ್ಕದ್ದು.

7. 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ಟುಗಳಿಗೆ ಮತ್ತು ಭಾಗ್ಯ ಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರಗಳಿಗೆ ಸಂಬಂಧಿಸಿದ ಎಲ್ಲಾ ಬೇಡಿಕೆಗಳ ಬಗ್ಗೆ ಮಹಾ ಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

8. ಈ ಆದೇಶವನ್ನು ಆರ್ಥಿಕ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 03 ಟಿಎಫ್‌ಪಿ 2014, ದಿನಾಂಕ : 04–04–2014ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಿದೆ.

**PR. 697**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

## ಇಂಧನ ಸಚಿವಾಲಯ

**ವಿಷಯ :** ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ವಿದ್ಯುತ್ ಸರಬರಾಜು ಕಂಪನಿಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ಹಣ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಡಿಇ 14 ಪಿಎಸ್‌ಆರ್ 2002, ದಿನಾಂಕ : 31–05–2002.
2. ಸರ್ಕಾರದ ಆದೇಶ ಸಂಖ್ಯೆ : ಡಿಇ 15 ಪಿಎಸ್‌ಆರ್ 2002, ದಿನಾಂಕ : 19–12–2002.
3. ಸರ್ಕಾರಿ ಆದೇಶ ಸಂಖ್ಯೆ : ಇಎನ್ 39 ಪಿಎಸ್‌ಆರ್ 2014, ದಿನಾಂಕ : 01–04–2014, 05–05–2014, 02–06–2014 ಮತ್ತು 01–07–2014.
4. ಪತ್ರ ಸಂಖ್ಯೆ : ಕೆಇಪಿಜಿಟಿ/ಪಿ14/2014–15/433–437, ದಿನಾಂಕ : 19–07–2014.

**ಪ್ರಸ್ತಾವನೆ :**

1. ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ಸುಧಾರಣಾ (ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ (ಕವಿಪ್ರನಿನಿ) ಉದ್ಯಮಗಳು ಮತ್ತು ಅದರ ಸಿಬ್ಬಂದಿಯು ವಿದ್ಯುಚ್ಛಕ್ತಿ ವಿತರಣಾ ಮತ್ತು ವಿದ್ಯುತ್ ಸರಬರಾಜು ಕಂಪನಿಗಳ

ವರ್ಗಾವಣೆ) ನಿಯಮಗಳು, 2002, ನಿಯಮ 4(13)(1)ರ ಪ್ರಕಾರ ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಸೇವೆಗಳನ್ನು ಎರಡನೇ ವರ್ಗಾವಣೆ ದಿನಾಂಕದ ಜಾರಿಗೆ ಮೊದಲು ಮತ್ತು ಕರ್ನಾಟಕ ವಿದ್ಯುತ್ ಮಂಡಳಿ ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ (ಕವಿಪ್ರನಿನಿ) ನಿರ್ದಿಷ್ಟಪಡಿಸಲಾದ ಸಿಬ್ಬಂದಿಯು ಸಲ್ಲಿಸಿದ ಸೇವೆಗಳಿಗಾಗಿ ನಿವೃತ್ತಿ ವೇತನ ನಿಧಿಗಳು ಮತ್ತು ಶಾಸನ ಪ್ರದತ್ತ ಹಾಗೂ ಇತರೇ ಸಿಬ್ಬಂದಿ ಸಂಬಂಧಿತ ನಿಧಿಗಳ ಸಂಗ್ರಹಣೆಗೆ ರಾಜ್ಯ ಸರ್ಕಾರವು ಜವಾಬ್ದಾರಿಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯಗಳದ್ದಲ್ಲ ಮತ್ತು ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಎರಡನೇ ವರ್ಗಾವಣೆ ಜಾರಿಯಾದ ಆಯಾಯ ದಿನಾಂಕದಲ್ಲಿದ್ದಂತೆ ನಿಧಿ ಸಂಗ್ರಹಣೆ ಮಾಡದ ಮಟ್ಟಿಗೆ ರಾಜ್ಯ ಸರ್ಕಾರವು ಹೊಣೆಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲವೆಂದು ತಿಳಿಸಲಾಗಿದೆ.

2. ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದ ಪ್ರಕಾರ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ನ್ನು " ಕರ್ನಾಟಕ ವಿದ್ಯುತ್ ಪ್ರಕರಣ ನಿಗಮ ನಿಯಮಿತ ಮತ್ತು ವಿದ್ಯುತ್ ಸರಬರಾಜು ಕಂಪನಿಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳೆಂದು" ಮರುನಾಮಕರಣ ಮಾಡಿ, Pay as you go ಪದ್ಧತಿಯನ್ನು ಅನುಸರಿಸಿ ಕವಿಪ್ರನಿನಿ ಮತ್ತು ಎಸ್ಕಾಂಗಳ ನೌಕರರ ನಿವೃತ್ತಿ ಸೌಲಭ್ಯಗಳನ್ನು (Terminal Benefits) ಪಾವತಿಸಲು ಒಪ್ಪಿಗೆ ನೀಡಿದೆ.

3. 2014-15ನೇ ಸಾಲಿನ ಆಯವ್ಯಯದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ವಿದ್ಯುತ್ ಸರಬರಾಜು ಕಂಪನಿಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ವಂತಿಗೆಗಾಗಿ "2801-80-101-1-13-106 (ಯೋಜನೇತರ)" ಲೆಕ್ಕಶೀರ್ಷಿಕೆಯಡಿ ರೂ. 500.00 ಕೋಟಿಗಳನ್ನು ಒದಗಿಸಲಾಗಿರುತ್ತದೆ. ಇದರಲ್ಲಿ ರೂ. 167.00 ಕೋಟಿಗಳನ್ನು ಈಗಾಗಲೇ ಮೇಲೆ (3)ರಲ್ಲಿ ಓದಲಾದ ಆದೇಶಗಳಲ್ಲಿ ಬಿಡುಗಡೆ ಮಾಡಿದೆ.

4. ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ವಿದ್ಯುತ್ ಸರಬರಾಜು ಕಂಪನಿಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳಿಗೆ ಆಗಸ್ಟ್ 2014ರ ಮಾಹೆಗೆ ರೂ. 75 ಕೋಟಿಗಳನ್ನು ಬಿಡುಗಡೆ ಮಾಡುವಂತೆ ಕೋರಲಾಗಿದೆ. ಸದರಿ ಕೋರಿಕೆಯನ್ನು ಸರ್ಕಾರವು ಪರಿಶೀಲಿಸಿ, 2014-15ನೇ ಸಾಲಿನ ಆಗಸ್ಟ್ 2014ರ ಮಾಹೆಗೆ ಲೆಕ್ಕಶೀರ್ಷಿಕೆ "2801-80-101-1-13-106" ಸಹಾಯಧನ (ಯೋಜನೇತರ) ಅಡಿಯಲ್ಲಿ ರೂ. 41.00 ಕೋಟಿಗಳ ಅನುದಾನ ಬಿಡುಗಡೆ ಮಾಡಲು ಪ್ರಸ್ತುತ ಸರ್ಕಾರಿ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 39 ಪಿಎಸ್‌ಆರ್ 2014, ಬೆಂಗಳೂರು, ದಿನಾಂಕ : 02-08-2014.**

1. ಸರ್ಕಾರವು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ 2014-15ನೇ ಸಾಲಿನ ಆಗಸ್ಟ್ 2014ರ ಮಾಹೆಗೆ ಲೆಕ್ಕಶೀರ್ಷಿಕೆ "2801-80-101-1-13-106" ಸಹಾಯಧನ (ಯೋಜನೇತರ)ದ ಅಡಿಯಲ್ಲಿ ರೂ. 41.00 ಕೋಟಿ (ನಲವತ್ತೊಂದು ಕೋಟಿಗಳು ಮಾತ್ರ) ಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ.

2. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆಯವರ ಮೇಲು ರುಜುವನ್ನು ಸ್ವೀಕೃತ ರಸೀದಿಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

3. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು " ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ" ಬಿಡುಗಡೆ ಮಾಡಿರುವ ಅನುದಾನದ ಬಳಕೆಯ ಬಗ್ಗೆ ದೃಢೀಕರಣ ಪತ್ರ (Utilisation Certificate) ನ್ನು ಸಲ್ಲಿಸತಕ್ಕದ್ದು.

4. ಈ ಆದೇಶವನ್ನು ಆರ್ಥಿಕ ಇಲಾಖೆಯ ಅಧಿಕೃತ ಜ್ಞಾಪಕ ಪತ್ರ ಸಂಖ್ಯೆ : ಆಇ 07 ಬಿಪಿಇ 2014, ಬೆಂಗಳೂರು ದಿನಾಂಕ : 31ನೇ ಜುಲೈ 2014ರಲ್ಲಿ ಇಲಾಖಾ ಮುಖ್ಯಸ್ಥರು ಮತ್ತು "ಅಂದಾಜು ಅಧಿಕಾರಿಗಳಿಗೆ" ನೀಡಿರುವ ಅಧಿಕಾರದ ಮೇರೆಗೆ ಹೊರಡಿಸಿದೆ.

**PR. 698**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

## ಇಂಧನ ಸಚಿವಾಲಯ

**ವಿಷಯ :** 2014-15ನೇ ಸಾಲಿನಲ್ಲಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತದಲ್ಲಿ ಸರ್ಕಾರದ ಬಂಡವಾಳ ಹೂಡಿಕೆಗೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. 2014-15ನೇ ಸಾಲಿನ ಆಯವ್ಯಯ
2. ಸರ್ಕಾರಿ ಆದೇಶ ಸಂಖ್ಯೆ : ಇಎನ್ 56 ಪಿಎಸ್‌ಆರ್ 2014, ದಿನಾಂಕ : 12-06-2014.
3. ಸರ್ಕಾರಿ ಆದೇಶ ಸಂಖ್ಯೆ : ಇಎನ್ 56 ಪಿಎಸ್‌ಆರ್ 2014/ಪಿ1, ದಿನಾಂಕ : 19-06-2014.
4. ಕವಿನಿನಿ ಪತ್ರ ಸಂಖ್ಯೆ : ಎ1 ಎಫ್3 ಬಿ2, ದಿನಾಂಕ : 04-08-2041.

ಪ್ರಸ್ತಾವನೆ :

1. ಮೇಲಿನ ಕ್ರ.ಸಂ.–1ರಲ್ಲಿ ಓದಲಾದ 2014–15ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ 4801–01–190–0–09–211(ಯೋಜನೆ) ಯಡಿ ವಿದ್ಯುಚ್ಛಕ್ತಿ ಬಳಕೆಯಲ್ಲಿ–ಬಂಡವಾಳ ಹೂಡಿಕೆಗಾಗಿ ರೂ. 420.22 ಕೋಟಿಗಳನ್ನು, ಲೆಕ್ಕಶೀರ್ಷಿಕೆ 4801–01–190–0–09–422(ಯೋಜನೆ) ವಿದ್ಯುಚ್ಛಕ್ತಿ ಬಳಕೆಯಲ್ಲಿ ಬಂಡವಾಳ ಹೂಡಿಕೆ–ಪರಿಶಿಷ್ಟ ಜಾತಿ ಉಪಯೋಜನೆಗಾಗಿ ರೂ. 128.65 ಕೋಟಿಗಳು ಮತ್ತು ಲೆಕ್ಕಶೀರ್ಷಿಕೆ 4801–01–190–0–09–423(ಯೋಜನೆ) ವಿದ್ಯುಚ್ಛಕ್ತಿ ಬಳಕೆಯಲ್ಲಿ ಬಂಡವಾಳ ಹೂಡಿಕೆ–ಗಿರಿಜನ ಉಪಯೋಜನೆಗಾಗಿ ರೂ. 52.15 ಕೋಟಿಗಳನ್ನೊಳಗೊಂಡಂತೆ ಇಂಧನ ವಲಯದಲ್ಲಿ ಸರ್ಕಾರದ ಬಂಡವಾಳ ಹೂಡಿಕೆಗಾಗಿ ಒಟ್ಟಾರೆ ರೂ. 601.02 ಕೋಟಿಗಳನ್ನು ಒದಗಿಸಲಾಗಿದೆ.

2. ಮೇಲಿನ ಕ್ರ.ಸಂ. –2ರಲ್ಲಿ ಓದಲಾದ ಆದೇಶದ ಪ್ರಕಾರ ಕರ್ನಾಟಕ ಆರ್ಥಿಕ ಸಂಹಿತೆ 1957ರ ಕಲಂ1–Aರಲ್ಲಿ ಪ್ರದತ್ತವಾದ ಅಧಿಕಾರದಂತೆ ಆರ್ಥಿಕ ಇಲಾಖೆಯು ಕರ್ನಾಟಕ ಆರ್ಥಿಕ ಸಂಹಿತೆ 1957ರ ಕಲಂ 17(ಸಿ)(4)ರ ಪ್ರಕಾರ ಸರ್ಕಾರದ ಬಂಡವಾಳ ಹೂಡಿಕೆಯ ಸಂಬಂಧ ರಾಜ್ಯ ಹುಜೂರು ಖಜಾನೆಯಿಂದ ಹಣ ಬಿಡುಗಡೆಯ ಕುರಿತು ಮಹಾಲೇಖಪಾಲರಿಂದ ಅಧಿಕಾರ ಪತ್ರ ಹೊರಡಿಸುವ ಷರತ್ತಿನಿಂದ ವಿನಾಯಿತಿ ನೀಡಿದೆ.

3. ಆರ್ಥಿಕ ಇಲಾಖೆ ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 03 ಟಿಎಫ್‌ಪಿ 2014, ಬೆಂಗಳೂರು, ದಿನಾಂಕ : 04–04–2014ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದ ಪ್ರಕಾರ 2014–15ನೇ ಸಾಲಿನ ಮೊದಲ ಮೂರು ತಿಂಗಳಿಗೆ ರೂ. 150.00 ಕೋಟಿಗಳನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಸರ್ಕಾರಿ ಆದೇಶದಲ್ಲಿ ಬಿಡುಗಡೆ ಮಾಡಲಾಗಿದೆ.

4. ಆರ್ಥಿಕ ಇಲಾಖೆಯ ಅಧಿಕೃತ ಜ್ಞಾಪನ ಪತ್ರ ಸಂಖ್ಯೆ : ಸಂ.ಆಇ 07 ಬಿಪಿಇ 2014, ಬೆಂಗಳೂರು ದಿನಾಂಕ : 31–07–2014ರಲ್ಲಿ ದಿನಾಂಕ : 1ನೇ ಏಪ್ರಿಲ್ 2014 ರಿಂದ 31ನೇ ಮಾರ್ಚ್ 2015ರವರೆಗಿನ ಅವಧಿಯಲ್ಲಿ ಪೂರ್ಣ ವರ್ಷಕ್ಕೆ ಆಯವ್ಯಯವನ್ನು ಅನುಮೋದಿಸಲಾಗಿದೆ ಎಂದು ತಿಳಿಸಲಾಗಿದೆ.

5. ಮೇಲೆ ಓದಲಾದ ಕ್ರಮ ಸಂಖ್ಯೆ 4ರಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ನಿಗಮ ನಿಯಮಿತರವರು ರೂ. 100.00 ಕೋಟಿಗಳಷ್ಟು ಈಕ್ವಿಟಿ ಹಣ ಬಿಡುಗಡೆ ಮಾಡಲು ಕೋರಿರುತ್ತಾರೆ. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ನಿಗಮ ನಿಯಮಿತರವರ ಕೋರಿಕೆಯನ್ನು ಪರಿಶೀಲಿಸಿ ರೂ. 60.00 ಕೋಟಿಗಳ ಬಂಡವಾಳವನ್ನು ಆಗಸ್ಟ್ 2014ರ ಮಾಹೆಯಲ್ಲಿ ಬಿಡುಗಡೆ ಮಾಡಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 56 ಪಿಎಸ್‌ಆರ್ 2014/ಪಿ1, ಬೆಂಗಳೂರು, ದಿನಾಂಕ : 13–08–2014.**

2014–15ನೇ ಸಾಲಿಗೆ ವಿದ್ಯುತ್ ವಲಯದಲ್ಲಿ ಸರ್ಕಾರದ ಬಂಡವಾಳ ಹೂಡಿಕೆಗಾಗಿ ಲೆಕ್ಕ ಶೀರ್ಷಿಕೆ "4801–01–190–09–211 Investment in Power Utilities (ಯೋಜನೆ)" ಯಡಿ ಸರ್ಕಾರವು ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ರೂ. 60.00 ಕೋಟಿಗಳನ್ನು (ರೂ. ಅರವತ್ತು ಕೋಟಿಗಳು ಮಾತ್ರ) ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಿ ಆದೇಶಿಸಿದೆ.

1. ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಸರ್ಕಾರದ ಉಪಕಾರ್ಯದರ್ಶಿ, ಇಂಧನ ಇಲಾಖೆರವರ ಮೇಲು ರುಜುವನ್ನು ಹಣ ಸ್ವೀಕೃತಿ ರಸೀದಿ (payee's receipts) ಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

2. ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿರುವ ಮೊಬಲಗನ್ನು ಬಂಡವಾಲ (Equity) ವಾಗಿ ಬಳಸಿಕೊಂಡು, ಈ ಬಗ್ಗೆ ದೃಢೀಕರಣ (Utilization Certificate) ಹಾಗೂ ಅನುಸರಣಾ ವರದಿಯನ್ನು ಸರ್ಕಾರಕ್ಕೆ ಒದಗಿಸತಕ್ಕದ್ದು.

3. ವಿದ್ಯುಚ್ಛಕ್ತಿ ಯೋಜನೆಗಳ ಮೇಲಣ ಬಂಡವಾಳ ಹೂಡಿಕೆಯನ್ನು ಮಹಾ ಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು ಹಾಗೂ ಮಹಾಲೇಖಪಾಲರವರಿಂದ ಪಡೆದುಕೊಳ್ಳಬೇಕಾಗಿರುವ ಸಹಮತಿಗೆ ವಿನಾಯಿತಿಯನ್ನು ಇಂಧನ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ : ಇಎನ್ 56 ಪಿಎಸ್‌ಆರ್ 2014, ದಿನಾಂಕ : 12–06–2014ರಲ್ಲಿ ನೀಡಿದೆ.

4. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 03 ಟಿಎಫ್‌ಪಿ 2014, ದಿನಾಂಕ : 04–04–2014ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**PR. 699**

## COMMERCE & INDUSTRIES SECRETARIAT
## PROCEEDINGS OF THE GOVERNMENT OF KARNATAKA

**Sub :** Karnataka Industrial Policy 2014-19 - reg.

**Read :** Government Order No. CI 233 SPI 2008, dated: 28.02.2009.

**PREAMBLE:**

The State Government considers industrial growth as a means to mitigate poverty and unemployment. Development of industry, trade and service sector promotes higher capital formation, improves per capita income level, absorbs surplus work force. To realize these benefits and expedite socio economic changes, the State accords top priority for industrial development. In the process, it is aimed at advancing the cause of inclusivity, balanced industrialization and creating employment opportunities across different classes and categories of populace.

The State Government had announced Karnataka Industrial Policy 2009-2014 vide G.O. No. CI 233 SPI 2008, Bangalore, dated 28.02.2009 for promoting manufacturing and selected service industries in the State. This Policy came into effect from 01.04.2009 and had validity up to 31.03.2014. Further the validity of Industrial Policy 2009-2014 was extended till the introduction of new Industrial Policy 2014-19.

Government of India has come out with the National Manufacturing Policy in 2011 with an objective of accelerated development, inclusive growth and provision of gainful employment. The policy aims to enhance share of manufacturing in GDP to 25% by 2025 and create 100 million jobs with appropriate skill sets, increase the depth in manufacturing and enhance global competitiveness.

The Karnataka Manufacturing Taskforce (MTF) constituted by the State Government to study the manufacturing sector in Karnataka and suggest interventions to drive growth in the sector in a sustainable and holistic manner, taking into account global trends and existing challenges in the manufacturing sector has given its valuable recommendations and suggestions.

It is in this context that the State Government is desirous of formulating a new Industrial Policy to be in alignment with the objectives and goals of the National Manufacturing Policy 2011 and the recommendations of Karnataka Manufacturing Taskforce (MTF) which would enable smooth transition of policy measures for the benefit of investors in the State.

The policy has been drafted through an extensive consultation process with all the stake holders i.e. Trade Bodies/ Associations, related Government Departments and deliberations on various components of the policy such as Infrastructure, facilitation mechanism, HRD, incentives and concessions, MSME development, focused sector etc. and Government appreciates the valuable suggestions of the Karnataka Manufacturing Taskforce (MTF) and all other stake holders. The views and suggestions offered by all the stakeholders have been incorporated suitably in the policy with the objective of making Karnataka a preferred destination for Industry.

In the light of the above, a decision has been taken by the Government to formulate and adopt a New Industrial Policy for the period 2014-19.

Hence the following order:

**GOVERNMENT ORDER No: CI 58 SPI 2013, BANGALORE, DATED:01.10.2014**

In the circumstances explained in the preamble, Government is pleased to announce the Karnataka Industrial Policy 2014-19 as detailed in Annexe to this order supported by the following annexures :

- Annexure 1 List of Service Enterprises eligible for package of Incentives and Concession
- Annexure 2 List of Industrial Activities / Enterprises not eligible for Incentives and Concession
- Annexure 3A Terms and Conditions for extending incentives and concessions
- Annexure 3B Terms and Conditions for Private Industrial Areas/Estates
- Annexure 4 Initiatives for Export Promotion
- Annexure 5 Definitions

The vision of Karnataka Industrial Policy 2014-19 is to build a prosperous Karnataka through inclusive, sustainable and balanced industrial development thereby creating large employment opportunities. The objectives of the policy are as follows:

(i) To maintain an industrial growth rate of 12 % per annum.

(ii) To enhance the contribution of manufacturing sector to the State GDP from present level of 16.87% to 20% by end of policy period

(iii) To attract investment of ₹ 5.00 lakh crore

(iv) To create employment opportunities for 15 lakh persons

(v) To create an environment to enhance ease of doing business in the State.

